

# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ

ಸಂಪ್ರಬಂಧದ ವಿಷಯ

# "ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿ ಕುಮಾರರಾಮನ ತೌಲನಿಕ ಅಧ್ಯಯನ"


ಮಾರ್ಗದರ್ಶಕರು

ಡಾ.ಎಸ್. ಶಾಂಭವಿ

ಸಂಶೋಧನಾ ವಿದ್ಯಾರ್ಥಿನಿ

ರತ್ನಮ್ಮ.ಟಿ


ವರ್ಷ: ೨೦೧೨-೨೦೧೩




ಅಧ್ಯಯನ ಕೇಂದ್ರ

ಬಿ.ಎಂ.ಶ್ರೀ, ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ,

೩ನೆಯ ಮುಖ್ಯ ರಸ್ತೆ, ನರಸಿಂಹ ರಾಜ ಕಾಲೋನಿ

ಬೆಂಗಳೂರು- ೫೬೦೦೧೯



# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ

ಸಂಪ್ರಬಂಧದ ವಿಷಯ

## "ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿ ಕುಮಾರರಾಮನ ತೌಲನಿಕ ಅಧ್ಯಯನ"

ಮಾರ್ಗದರ್ಶಕರು.

ಡಾ.ಎಸ್. ಶಾಂಭವಿ

ಸಂಶೋಧನಾ ವಿದ್ಯಾರ್ಥಿನಿ.

ರತ್ನಮ್ಮ.ಟಿ

ವರ್ಷ: ೨೦೧೨-೨೦೧೩



ಅಧ್ಯಯನ ಕೇಂದ್ರ

ಬಿ.ಎಂ.ಶ್ರೀ, ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ,

೩ನೆಯ ಮುಖ್ಯ ರಸ್ತೆ, ನರಸಿಂಹ ರಾಜ ಕಾಲೋನಿ

ಬೆಂಗಳೂರು- ೫೬೦೦೧೯

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ **೨೦೧೨-೨೦೧೩** ನೇ ಸಾಲಿನ ಎಂ.ಫಿಲ್. ಪದವಿಗಾಗಿ "ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿ ಕುಮಾರರಾಮನ ತೌಲನಿಕ ಅಧ್ಯಯನ" ಎಂಬ ಸಂಪ್ರಬಂಧವನ್ನು ಶ್ರೀಮತಿ ರತ್ನಮ್ಮ.ಟಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಡಾ|| ಎಸ್. ಶಾಂಭವಿ
ಕನ್ನಡ ಉಪನ್ಯಾಸಕಿ
ಶ್ರೀಮತಿ ವಿ.ಹೆಚ್.ಡಿ.ಕೇಂದ್ರಿಯ ಗೃಹ ವಿಜ್ಞಾನ ಕಾಲೇಜು,
ಶೇಷಾದ್ರಿ ರಸ್ತೆ, ಬೆಂಗಳೂರು-01

ಡಾ.ಎಸ್.ಶಾಂಭವಿ, ಎಂ.ಎ., ಪಿ.ಹೆಚ್.ಡಿ.

ಸ್ಥಳ : ಬೆಂಗಳೂರು

ದಿನಾಂಕ :

# ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ ಬೆಂಗಳೂರು ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ **೨೦೧೨-೨೦೧೩** ನೇ ಸಾಲಿನ ಎಂ.ಫಿಲ್ ಪದವಿಗಾಗಿ "ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿ ಕುಮಾರರಾಮನ ತೌಲನಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಶ್ರೀಮತಿ ಡಾ.ಎಸ್.ಶಾಂಭವಿ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು. ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧನಾ ವಿದ್ಯಾರ್ಥಿನಿ

ರತ್ನಮ್ಮ.ಟಿ

ಸ್ಥಳ : ಬೆಂಗಳೂರು.

ದಿನಾಂಕ :

# ಪರಿವಿಡಿ

## "ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿ ಕುಮಾರರಾಮನ ತೌಲನಿಕ ಅಧ್ಯಯನ"

## *ಶಿಷ್ಟ ಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿನ "ಕುಮಾರರಾಮ" ಒಂದು ತೌಲನಿಕ ಅಧ್ಯಯನ*

## ಅಧ್ಯಾಯ-1

### ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದ ಮಾನವನ ಅನುಭವದ ಶ್ರೀಮಂತ ಭಂಡಾರ, ಅದು ನೂರಾರು ವರ್ಷಗಳಿಂದ ಬಹು ಮುಖ್ಯ ಪಾತ್ರವನ್ನು ವಹಿಸಿದೆ. ಜನತೆಯ ಅಂತರಂಗದ ವಾಣಿಯಾಗಿ, ಒಂದು ಕಾಲದಲ್ಲಿ ಜನಸಾಮಾನ್ಯರ ಸಕಲ ವಿದ್ಯೆಯೂ ಇದಾಗಿತ್ತು. ಬಹುಕಾಲ ಕಂಠಸ್ಥ ಸಂಪ್ರದಾಯದಲ್ಲಿಯೇ ಬೆಳೆದುಬಂದ ಜಾನಪದ, ಆಧುನಿಕ ವಿದ್ವಾಂಸರನ್ನು ವಿಶೇಷವಾಗಿ ಗಮನಹರಿಸುವಂತೆ ಮಾಡಿತು. ಮಾನವಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸ, ಸಾಹಿತ್ಯ-ಸಂಗೀತ, ಕಲೆ ಮೊದಲಾದ ವಿಷಯಗಳ ಮೇಲೆ ಬೆಳಕು ಚೆಲ್ಲುವ ಅಧ್ಯಯನ ಇದಾಗಿದೆ. ಎರಡು ಮೂರು ಶತಮಾನಗಳಿಂದ ಪಾಶ್ಚಾತ್ಯ ದೇಶಗಳಲ್ಲಿ ವ್ಯವಸ್ಥಿತ ಕ್ರಮಗಳಲ್ಲಿ ನಡೆದುಕೊಂಡು ಬಂದಿದೆ. ಇಂದು ಯೂರೋಪ್ ಮತ್ತು ಅಮೆರಿಕಾಗಳಲ್ಲಿ ಪ್ರಮುಖ ವಿಜ್ಞಾನವೇ ಆಗಿ ಸ್ವೀಕೃತವಾಗಿರುವುದು ಸಾಂಸ್ಕೃತಿಕ ಅಧ್ಯಯನದ ಪರಂಪರೆಗೆ ಸಂದ ಕೊಡುಗೆಯಾಗಿದೆ.

ಜಾನಪದ ಅತ್ಯಂತ ವ್ಯಾಪಕವಾದ ವಿಷಯ. ಸಂಪ್ರದಾಯ ಮುದ್ರೆಯನ್ನು ಪಡೆದು, ಎಲ್ಲಾ ವಿಷಯಗಳನ್ನು ತನ್ನ ಗರ್ಭದಲ್ಲಿ ಅಳವಡಿಸಿಕೊಂಡಿದೆ. ಕಲೆ ಹಾಗೂ ಶಾಸ್ತ್ರ ಮುಖಗಳೆರಡೂ ಇದರಲ್ಲಿ ಅಂತರ್ಗತವಾಗಿದೆ. ಪುರಾಣ, ಐತಿಹ್ಯ, ಕಥೆ, ಗೀತೆ, ಲಾವಣಿ ಮೊದಲಾದವು ಸಾಹಿತ್ಯಕ ಬಗೆಗಳಷ್ಟೇ ಪ್ರಮುಖವಾದವು. ಕ್ರಿಯಾತ್ಮಕ ಬಗೆಗಳಾದ ಜನಪದ ನೃತ್ಯ, ನಾಟಕ, ಕುಶಲಕಲೆ, ಪದಗಳು-ಭಾಷಿಕಗಳಾಗಿ, ಗಾದೆ, ಒಗಟುಗಳು ವಿಶೇಷ ಅಭ್ಯಾಸಕ್ಕೆ ಒಳಗಾಗಿರುವ ಇವುಗಳು ಸಾಹಿತ್ಯಕ ಬಗೆಗಳು ಆಗಿವೆ. ನಂಬಿಕೆಯ ವಲಯದಲ್ಲಿ ಬರುವ ವೈದ್ಯ, ಮಾಟ, ಮಂತ್ರ, ಶಕುನ ಮುಂತಾದವುಗಳು ವೈಜ್ಞಾನಿಕ ಬಗೆಗಳ ಹಿನ್ನಲೆಯನ್ನೂ ಗುರುತಿಸಬಹುದು.

ಕರ್ನಾಟಕದ ಜಾನಪದ ಅಧ್ಯಯನದ ಬಗ್ಗೆ ಹೊಸ ಹೊಸ ಆಸಕ್ತಿ, ಕುತೂಹಲ, ಉತ್ಸಾಹಗಳು ಹೆಚ್ಚು ಹೆಚ್ಚು ಕಂಡು ಬರುವುದು. ಶಾಸ್ತ್ರೀಯವಾದ ತಳಹದಿಯ ಮೇಲೆ ಜಾನಪದ ಸಂಗ್ರಹ, ಸಂಶೋಧನೆಗಳು ನೆಲೆಗೊಳ್ಳಬೇಕಾಗಿದೆ.

ಸಂಸ್ಕೃತಿಯ ತಾಯಿ ಬೇರಾದ ಜಾನಪದದ ಬಗ್ಗೆ ಭಾರತದಲ್ಲಿ ನಿರ್ಲಕ್ಷ್ಯವೇ ಹೆಚ್ಚಾಗಿದ್ದು ಈವರೆಗೆ ನಡೆದಿರುವ ಸಂಗ್ರಹ ಅಸಮಗ್ರವಾಗಿದೆ ಎನ್ನಬಹುದು. ಉತ್ತರ ಭಾರತದ ಅನೇಕ ರಾಜ್ಯಗಳಲ್ಲಿ ಕೆಲವು ಜಾನಪದದ ಪ್ರಕಾರಗಳಿಗೆ ಸಂಬಂಧಿಸಿದಂತೆ ಸಂಶೋಧನೆಗಳು ನಡೆದಿದ್ದರೂ ಸಮಗ್ರ ಜಾನಪದದ ಬಗೆಗೆ ವ್ಯಾಪಕವಾದ ಅಧ್ಯಯನ ಇನ್ನೂ ನಡೆಯಬೇಕಾಗಿದೆ. 'ಭಾರತವು ಜಾನಪದದ 'ತವರು' ಎಂದು ಪಾಶ್ಚಾತ್ಯ ಜಾನಪದ ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಜಾನಪದ ಸಂಗ್ರಹಗಳು ಸಾಕಷ್ಟು ಆಗಿದ್ದರೂ ಸಮರ್ಪಕ ರೀತಿಯಲ್ಲಿ ಆಗಬೇಕಾಗಿದೆ. ಈ ಅಂಶವು ಸತ್ಯಾಂಶಕ್ಕೆ ಹತ್ತಿರವಾಗಿದೆ.

ನಿತ್ಯ ಪರಿವರ್ತನಾಶೀಲವಾದ ಈ ಸಮಾಜದಲ್ಲಿ ನವನಾಗರಿಕತೆಯ ತುತ್ತತುದಿಯಲ್ಲಿರುವ ಮಾನವನ ಅಭಿರುಚಿ, ಆಲೋಚನಾಶಕ್ತಿ ಬದಲಾಗುತ್ತಾ ಹೋಗುತ್ತಿದೆ. ವೈಜ್ಞಾನಿಕ ಸಂಶೋಧನೆಗಳು ಕೈಗಾರಿಕೀಕರಣ, ನಗರೀಕರಣ ಇವುಗಳ ಫಲದಿಂದ ಮಾನವನ ಅಲೋಚನೆಗಳು ಬದಲಾಗುತ್ತಿವೆ. ಹೊಸ ಹೊಸ ವಿಚಾರಗಳಿಗೆ ಮನುಷ್ಯ ತನ್ನನ್ನು ಅಳವಡಿಸಿಕೊಳ್ಳುತ್ತಾ ತಾನು ಇಡೀ ಪ್ರಪಂಚದ ನಾನಾ ರೀತಿಯ ವಿಚಾರಗಳಿಗೆ ಮನಸೋಲುತ್ತಿದ್ದಾನೆ. ಹೀಗಿರುವಾಗ ನಮ್ಮ ಜಾನಪದ ಸ್ವರೂಪವು ಬದಲಾವಣೆಯನ್ನು ಹೊಂದುತ್ತಿರುವುದು ಸಹಜವಾಗಿದೆ.

ಜನಪದದ ಅಧ್ಯಯನ ಆದಿಮಾನವನಿಂದ ಹಿಡಿದು ಇಂದಿನವರೆಗೂ ಬೆಳೆದು ಬಂದಿರುವ ಜ್ಞಾನ ವಿಜ್ಞಾನಗಳನ್ನೊಳಗೊಂಡಿರುವುದರಿಂದ ಶಿಷ್ಟ ಸಂಸ್ಕೃತಿಯ ಮೂಲವನ್ನು ಜಾನಪದದಲ್ಲಿ ಕಾಣಬಹುದಾಗಿದೆ.

"ಇತ್ತೀಚಿನ ಜಾನಪದ ಅಧ್ಯಯನದಲ್ಲಿ ಪ್ರಾಚೀನ ಮಧ್ಯಕಾಲೀನ ಹಾಗೂ ಆಧುನಿಕ ಶಿಷ್ಟ ಮಹಾಕಾವ್ಯಗಳ ಬಗ್ಗೆ ಕಳೆದ ಎರಡು ದಶಕಗಳಿಂದ ಮಾತ್ರ ಅಧ್ಯಯನ ನಡೆದಿದೆ". ಜಾನಪದ ಮಹಾಕಾವ್ಯಗಳ ತೌಲನಿಕ ಅಧ್ಯಯನ ನಡೆದಿದೆ. ಶಿಷ್ಟ ಕಾವ್ಯಗಳಲ್ಲಿಯೂ ತೌಲನಿಕ ಅಧ್ಯಯನ ನಡೆದಿದೆ. ಆದರೆ ಜಾನಪದ ಸಾಹಿತ್ಯದಲ್ಲಿ ರಚನೆಯಾದ ಕಾವ್ಯಗಳಿಗೂ ಶಿಷ್ಟಸಾಹಿತ್ಯದಲ್ಲಿ ರಚನೆಯಾದ ಕಾವ್ಯಗಳಿಗೂ ತೌಲನಿಕ ದೃಷ್ಟಿಯಿಂದ ಅಧ್ಯಯನ ಮಾಡಿರುವುದು ತುಂಬಾ ಕಡಿಮೆ ಎಂದು ಹೇಳಬಹುದು. ಪ್ರಸ್ತುತ ಮಧ್ಯಕಾಲೀನ ಚರಿತ್ರೆಯಲ್ಲಿ ಬರುವ ವೀರನು 'ಪರದಾರ ಸಹೋದರ' ಎಂಬ ಬಿರುದಿಗೆ ಪಾತ್ರನಾದ ಕುಮಾರರಾಮನ ಬಗ್ಗೆ ಶಿಷ್ಟ ಸಾಹಿತ್ಯದಲ್ಲಿ ಮತ್ತು ಜನಪದ

ಸಾಹಿತ್ಯದಲ್ಲಿ ಸಾಕಷ್ಟು ಕೃತಿಗಳು ರಚನೆಯಾಗಿವೆ. ಈ ದೃಷ್ಟಿಯಿಂದ ಶಿಷ್ಟ ಸಾಹಿತ್ಯದಲ್ಲಿರುವ ಕುಮಾರರಾಮ ಜನಪದ ಸಾಹಿತ್ಯದಲ್ಲಿರುವ ಕುಮಾರರಾಮನನ್ನು ಕುರಿತು ತೌಲನಿಕವಾಗಿ ಅಧ್ಯಯನ ಮಾಡುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

ಭಾರತವು ಹಲವಾರು ವೈಶಿಷ್ಟ್ಯಗಳಿಂದ ಕೂಡಿದೆ. ಆಚಾರ, ವಿಚಾರ, ಭಾಷೆ, ಉಡುಪು, ಭೌಗೋಳಿಕ ಹೀಗೆ ವಿಭಿನ್ನ ನೆಲೆಯಲ್ಲಿ ನಮ್ಮ ದೇಶವನ್ನು ಗುರುತಿಸಬಹುದು. ಹಾಗಾಗಿಯೇ ಇಲ್ಲಿ ವಿದೇಶೀಯರು ನೆಲೆಯೂರಿ ಇಲ್ಲಿಯ ಸಂಸ್ಕೃತಿಯನ್ನು ಅಧ್ಯಯನ ಮಾಡಿದಾಗ ಬಹುರೂಪಿ ಸಂಸ್ಕೃತಿಯು ಭಾರತವನ್ನು ವಿಭಿನ್ನವಾಗಿ ಕಾಣಿಸಿತು ಎಂದು ಎ.ಕೆ.ರಾಮಾನುಜನ್ ಅವರು "ಭಾರತೀಯತೆ ಎನ್ನುವ ಒಂದು ಚಿಂತನಾಕ್ರಮ ಇದೇಯೇ" (ರಾಜಾರಾಮ ಹೆಗಡೆ (ಸಂ)2004,ಪು 281) ಎನ್ನುವ ಲೇಖನದಲ್ಲಿ ಇಂತಹ ಭಿನ್ನತೆಯನ್ನು ನಿರೂಪಿಸಿದ್ದಾರೆ. ಕರ್ನಾಟಕವೂ ಸಹ ವಿಭಿನ್ನ ಸಂಪ್ರದಾಯ ಆಚರಣೆ, ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆಯದೇ ಆದ ಸ್ವರೂಪ ಸಾಹಿತ್ಯದಲ್ಲಿ ಮತ್ತು ಜನಪದ ಸಾಹಿತ್ಯದಲ್ಲೂ ಕಾಣುತ್ತೇವೆ.

ಒಂದು ಪರಂಪರೆಯನ್ನು ಜನಪದಸಾಹಿತಿಗಳು, ಶಿಷ್ಟಸಾಹಿತಿಗಳು ಹಲವು ಬಗೆಯಲ್ಲಿ ಮುಖಾಮುಖಿಯಾಗಿಸುತ್ತಾರೆ. ಇಂತಹ ಮುಖಾಮುಖಿಗೆ ಒಂದು ಪರಂಪರೆಯೇ ಇದೆ. ಜನಪದ ಬೇರು ಕವಿವಾಣಿ ಹೂವು ಎನ್ನುವಂತೆ ಎಷ್ಟೋ ವಿಷಯಗಳು ಜನಪದ ಸಾಹಿತ್ಯದಿಂದ ಪ್ರೇರಣೆ ಪಡೆದು ಶಿಷ್ಟಸಾಹಿತ್ಯದ ರಚನೆ ಮಾಡಿದ್ದಾರೆ. ಎಂಬುದು ಸತ್ಯವಾದದ್ದು. ಜನಪದರು ತಮ್ಮ ನೋವು ನಲಿವುಗಳನ್ನು ಹಾಗೂ ತನಗೆ ಇಷ್ಟವಾದ ವೀರನನ್ನೋ, ದೇವರನ್ನೋ ತನ್ನದೇ ಆದ ರೀತಿಯಲ್ಲಿ ಹಾಡು ಕಥೆಗಳ ಮೂಲಕ ಬಣ್ಣಿಸಿ ಮನ ಮನೆಗಳಲ್ಲಿ ಉಳಿಯುವಂತೆ ಮಾಡಿದ್ದಾರೆ.

1500ವರ್ಷಗಳ ಸುದೀರ್ಘ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವು ಸಮೃದ್ಧತೆಯನ್ನು ಪಡೆದುಕೊಂಡು ವೈವಿಧ್ಯತೆಯಿಂದ ಕೂಡಿದೆ. ಸುದೀರ್ಘವಾಗಿ ಬೆಳೆದು ಬಂದಿರುವ ಕನ್ನಡ ಸಾಹಿತ್ಯದಲ್ಲಿ ಜೈನ, ವೀರಶೈವ, ವೈದಿಕ ಕವಿಗಳು ಉಲ್ಲೇಖಿತರಾಗಿದ್ದಾರೆ. ಇಲ್ಲಿ ಪ್ರಮುಖವಾಗಿ ಜೈನಧರ್ಮ ಪ್ರಸಾರ, ವೀರಶೈವ ಧರ್ಮ ಪ್ರಸಾರ ಭಾಗವತ ಸಂಪ್ರದಾಯಗಳನ್ನು ಪ್ರಸಾರ ಮಾಡಲು ಪ್ರಯತ್ನ ಎಂಬುದು ಗಮನಾರ್ಹ. ಈ ಸಾಹಿತ್ಯ ಸೃಷ್ಟಿಯು ಸಾಹಿತ್ಯ ಪ್ರಕಾರಗಳಾದ ಚಂಪೂ, ರಗಳೆ, ಷಟ್ಪದಿ, ಸಾಂಗತ್ಯ ಮೊದಲಾದ ಛಂದೋ ರೂಪಗಳಲ್ಲಿ ಮೈದಳೆದಿದೆ. ವಚನ ಸಾಹಿತ್ಯ,

ಕೀರ್ತನ ಸಾಹಿತ್ಯ, ಕುರಿತು ಅನೇಕ ನಾಟಕ, ಕಾದಂಬರಿಗಳು ಬಂದಿವೆ. ಹೀಗೆ ಸಾಹಿತ್ಯವು ಆಯಾ ಕಾಲಕ್ಕೆ ತಕ್ಕಂತೆ ಆ ಕಾಲದ ವಸ್ತುವನ್ನು ಕುರಿತು ಶಿಷ್ಟ ಕವಿಗಳು ಜನಪದ ಕವಿಗಳು ಸಾಹಿತ್ಯ ರಚಿಸುತ್ತಾ ಬಂದಿದ್ದಾರೆ.

ಮಧ್ಯಕಾಲೀನ ಕರ್ನಾಟಕದ ಚರಿತ್ರೆಯಲ್ಲಿ ಕುಮಾರರಾಮನದು ಪ್ರಮುಖ ಹೆಸರು. ಜನಪ್ರಿಯ ವ್ಯಕ್ತಿ ಎಂದೇ ಹೇಳಬಹುದು. ವಿಜಯನಗರ ಪೂರ್ವದ ಇತಿಹಾಸದಲ್ಲಿ ಕಮ್ಮಟದ ನಾಯಕರ ಮನೆತನದಲ್ಲಿ ಮೂರನೆಯ ಹಾಗೂ ಕೊನೆಯ ಅರಸನಾಗಿ ಉಲ್ಲೇಖಿತನಾಗಿದ್ದಾನೆ. ಐತಿಹಾಸಿಕ ಆಕರಗಳಲ್ಲಿ ಈತನ ಬಗೆಗೆ ಹೆಚ್ಚಿನ ವಿವರಗಳು ದೊರೆಯದೇ ಹೋದರೂ ಮೌಖಿಕ ಪರಂಪರೆಯಲ್ಲಿ ಹಾಗೂ ಶಿಷ್ಟಸಾಹಿತ್ಯದಲ್ಲಿ ಸಾಕಷ್ಟು ವಿವರಗಳು ದೊರೆಯುತ್ತವೆ. ಪರನಾರಿ ಸೋದರನಾಗಿ, ಶತ್ರು ಸೈನ್ಯದ ವಿರುದ್ಧ ವೀರಾವೇಶದಿಂದ ಹೋರಾಡಿದ ಪರಾಕ್ರಮಿಯಾಗಿ, ಎಲ್ಲಕ್ಕೂ ಮಿಗಿಲಾಗಿ ಜನಪದರ ಆರಾಧ್ಯದೈವವಾಗಿ, ಸ್ಥಳೀಯ ಜನರ ಮನದಲ್ಲಿ ನೆಲೆ ನಿಂತಿರುವ ಕುಮಾರರಾಮ ಒಬ್ಬ ಸಾಂಸ್ಕೃತಿಕ ವೀರನಾಗಿದ್ದಾನೆ.

ನಡುಗನ್ನಡ ಸಾಹಿತ್ಯ ಸಂದರ್ಭದಲ್ಲಿ ಹಲವಾರು ಕವಿಗಳು ಕುಮಾರರಾಮನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು ಕೃತಿಗಳನ್ನು ರಚಿಸಿದ್ದಾರೆ. ಅಂತಹ ಕವಿಗಳಲ್ಲಿ ಪ್ರಮುಖವಾದವರಲ್ಲಿ ನಂಜುಡ ಕವಿ ಬರೆದಿರುವ 'ಕುಮಾರರಾಮನ ಸಾಂಗತ್ಯ' ಈ ಕೃತಿ ಮುಂದೆ ಬಂದಂತಹ ಕವಿಗಳಿಗೆ ಮಾರ್ಗದರ್ಶನವಾಗಿದೆ. ಈ ಕೃತಿಯನ್ನು ಆಧಾರವಾಗಿಟ್ಟುಕೊಂಡು ಹೊಸಗನ್ನಡ ಸಂದರ್ಭದಲ್ಲಿಯೂ ಕುಮಾರರಾಮನಿಗೆ ಸಂಬಂಧಿಸಿದ ಹಲವಾರು ಕೃತಿಗಳು ವಿವಿಧ ಪ್ರಕಾರಗಳಲ್ಲಿ ಪ್ರಕಟಗೊಂಡಿವೆ.

ಜನಪದ ಸಾಹಿತ್ಯದಲ್ಲೂ ಹೇರಳವಾಗಿ ಕುಮಾರರಾಮನ ಬಗ್ಗೆ ವಿವರಗಳು ದೊರೆಯುತ್ತವೆ. ಗದ್ದಗೀಮಠರು ಸಂಪಾದಿಸಿರುವ ಕೃತಿ 'ಕುಮಾರರಾಮನ ದುಂದುಮೆ' ಡಾ.ಕೆ.ಎಂ.ಮೈತ್ರಿ ಸಂಪಾದಿಸಿರುವ 'ಕುಮಾರರಾಮ ಮತ್ತು ಕೃಷ್ಣ ಗೊಲ್ಲರ ಕಾವ್ಯ' ಹೀಗೆ ಜನಪದಸಾಹಿತ್ಯ, ಶಿಷ್ಟಸಾಹಿತ್ಯದಲ್ಲಿಯೂ ಕುಮಾರರಾಮನ ಬಗ್ಗೆ ಹೇರಳವಾದ ವಿವರಗಳು ದೊರೆಯುತ್ತವೆ.

ಪ್ರಸ್ತುತ ಪ್ರಬಂಧದಲ್ಲಿ ಶಿಷ್ಟಸಾಹಿತ್ಯದಲ್ಲಿ ಬಿಂಬಿತವಾಗಿರುವ ಕುಮಾರರಾಮ ಮತ್ತು ಜನಪದ ಸಾಹಿತ್ಯದಲ್ಲಿ ಬಿಂಬಿತವಾಗಿರುವ ಕುಮಾರರಾಮನ ಚಿತ್ರಣವನ್ನು

ತೌಲನಿಕ ದೃಷ್ಟಿಯಿಂದ ಅಧ್ಯಯನ ಮಾಡುವುದೇ ಈ ಪ್ರಬಂಧದ ಉದ್ದೇಶವಾಗಿದೆ. ಕರ್ನಾಟಕದಲ್ಲಿ ಮಂಟೇಸ್ವಾಮಿ, ಮಹದೇಶ್ವರ, ಜುಂಜಪ್ಪ, ಮೈಲಾರಲಿಂಗ, ಎಲ್ಲಮ್ಮ ಮುಂತಾದ ಸಾಂಸ್ಕೃತಿಕ ನಾಯಕ ನಾಯಕಿಯರು ಒಂದು ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಿಕೊಂಡಿರುವುದನ್ನು ಸಂಶೋಧನೆಗಳು ಗುರುತಿಸಿವೆ. ಅದೇ ರೀತಿ ಕುಮಾರರಾಮನ ಚಾರಿತ್ರಿಕ ಹಿನ್ನಲೆ ಸಾಂಸ್ಕೃತಿಕ ಆಯಾಮಗಳು ಹಾಗೂ ಆಧುನಿಕ ಪೂರ್ವ ಸಾಹಿತ್ಯದ ಕೃತಿಗಳು ಆತನನ್ನು ಚಿತ್ರಿಸಿದ ಬಗೆ ಇತ್ಯಾದಿಗಳ ಕುರಿತು ಹಲವಾರು ಅಧ್ಯಯನಗಳು ಈಗಾಗಲೇ ನಡೆದಿವೆ. ಹೊಸಗನ್ನಡ ಸಾಹಿತದಲ್ಲಿಯೂ ಅಧ್ಯಯನಗಳು ನಡೆದಿವೆ. ಚಾರಿತ್ರಿಕವಾಗಿ ಕುಮಾರರಾಮನು ಎಷ್ಟು ಮಹತ್ವ ಪಡೆದಿದ್ದಾನೆ ಎಂಬುದನ್ನು ವಿವರವಾಗಿ ಚರ್ಚಿಸಲಾಗಿದೆ. ಆದರೆ ಶಿಷ್ಟಸಾಹಿತ್ಯದಲ್ಲಿ ಕುಮಾರರಾಮನ ಕಥೆಗೂ ಜನಪದ ಸಾಹಿತ್ಯದಲ್ಲಿರುವ ಕುಮಾರರಾಮನ ಕಥೆಗೂ ಇರುವ ಭಿನ್ನತೆ ಹೋಲಿಕೆ ಮತ್ತು ವರ್ಣನೆಯನ್ನು ತೌಲನಿಕವಾಗಿ ಇದುವರೆಗೂ ಅಧ್ಯಯನ ಮಾಡಿಲ್ಲವೆಂಬುದು ನನ್ನ ಅರಿವಿಗೆ ಬಂದ ವಿಷಯ. ತೌಲನಿಕ ದೃಷ್ಟಿಯಿಂದ ಅಧ್ಯಯನ ಮಾಡಿ ಹೊಸ ದೃಷ್ಟಿಕೋನಕ್ಕೆ ಕಾರಣವಾಗಬಹುದೆಂಬ ಆಶಯದಿಂದ ಈ ಅಧ್ಯಯನ ಮಾಡಲು ಬಯಸಿದ್ದೇನೆ.

ಕನ್ನಡ ನಾಡಿನ ಸ್ಥಳೀಯ ಚರಿತ್ರೆಯಲ್ಲಿ ಕುಮಾರರಾಮನ ಕಥೆಗೆ ವಿಶೇಷ ಮಹತ್ವವಿದೆ. ವೀರ, ತ್ಯಾಗ, ಬಲಿದಾನಗಳಂತಹ ವ್ಯಕ್ತಿಯ ನೈತಿಕ ಮೌಲ್ಯಗಳೆಲ್ಲದರ ಪ್ರತೀಕವಾಗಿರುವ ಕುಮಾರರಾಮನ ಕಥೆ ಅವಿಸ್ಮರಣೀಯವಾದ ಘಟನೆ ಕನ್ನಡಿಗರ ಮನಸ್ಸನ್ನು ಆಳವಾಗಿ ಕಲಕಿದೆ. ಆ ಮೇಲೆ ಅಸ್ತಿತ್ವಕ್ಕೆ ಬಂದ ವಿಜಯನಗರ ಸಾಮ್ರಾಜ್ಯದ ಸುಭದ್ರತೆಯನ್ನು ಭೇದಿಸಿ, ಇದು ಅನೇಕ ರೂಪದ ಭೌತಿಕ ಆಕರ ಸಾಮಾಗ್ರಿಗಳಲ್ಲಿ ಬಿಚ್ಚಿಕೊಂಡಿತು, ಹೀಗಾಗಿ ಇವನನ್ನು ಕುರಿತು ರಾಜಕೀಯ, ಸಾಮಾಜಿಕ, ಆಚಾರಾತ್ಮಕ, ಭಾಷಿಕ ಅವಶೇಷಗಳು ನೂರಾರು ಸಂಖ್ಯೆಯಲ್ಲಿ ಹುಟ್ಟಿಕೊಂಡವು, ಸಮಕಾಲೀನಗೊಳ್ಳುತ್ತಲೂ ಬಂದವು. ಸಾಲದುದಕ್ಕೆ ತೆಲುಗು, ತಮಿಳು, ತುಳು ಭಾಷೆಗಳಲ್ಲಿಯೂ ಆಕರಗಳು ಸೃಷ್ಟಿಯಾಗುತ್ತಾ ಬಂದವು.

ರಾಜಕೀಯ ಅವಶೇಷಗಳನ್ನು ಕುರಿತು ಹೇಳುವುದಾದರೆ ಇಂದಿಗೂ ಕಮ್ಮಟದುರ್ಗದಲ್ಲಿ ಕೋಟೆ, ರಾಮನದೊಣೆ, ಕಾಟಪ್ಪನಗುಡ್ಡ, ಬೊಲ್ಲನಗುಂಡು, ಬಾದೂರನ ಬಂಡೆ, ಮಾದಗ ಹಂಪಯ್ಯನ, ಗುಡ್ಡಗಳನ್ನು ಹೊಸಮಲೆದುರ್ಗದಲ್ಲಿ (ಇಂದಿನ ರಾಮಗಡ) ಕೋಟೆ, ಬೊಲ್ಲನಬಂಡೆ, ಟಗರಿನಬಯಲು, ಬೋಲ್ಲನಹೆಜ್ಜೆ, ಕಾಟಣ್ಣನಶಿಲ್ಪ, ಕುಮಾರರಾಮನ ಹಟ್ಟಿ, ಮಾದಗಹಂಪಯ್ಯನ ಕಲ್ಲು, ಹರಿಯಾಲದೇವಿ

ಬಚ್ಚಲು, ರತ್ನಾಜಿ ಮಡಿಲು ಇತ್ಯಾದಿ ಸ್ಮಾರಕಗಳು ಸಿಗುತ್ತವೆ. ಹೊಳಲಗುಂದಿ(ಅದವಾನಿ ತಾಲ್ಲೂಕು)ಯ ಸಿದ್ದೇಶ್ವರ ದೇವಾಲಯದ ಗೋಡೆಯ ಮೇಲೆ ಕುಮಾರರಾಮನ ಚೆಂಡಿನಾಟದ ಬಣ್ಣದ ಚಿತ್ರ ಬಿಡಿಸಲಾಗಿದ್ದು, ಇದರ ಕೆಳಗೆ 'ರಾಮಣ್ಣ' ಎಂಬ ಬರಹವು ಇದೆ. ಇದು 18ನೆಯ ಶತಮಾನ ಕಲಾಕೃತಿ.

ಸಾಮಾಜಿಕವಾಗಿ ಹೇಳುವುದಾದರೆ ರತ್ನಾಜಿಯ ಪರಂಪರೆ 'ದೊಂಬರು' ಹೆಸರಿನ ಒಂದು ಜನಾಂಗವೇ ಶಿವಮೊಗ್ಗ ಜಿಲ್ಲೆಯಲ್ಲಿ ಕಂಡುಬರುತ್ತದೆ. ಆಚರಣೆಗೆ ಬಂದರೆ ಕಮ್ಮಟ ಮತ್ತು ಹೊಸಮಲೆದುರ್ಗಗಳಲ್ಲಿ ಕುಮಾರರಾಮನ ಗುಡಿಗಳಿವೆ. ದರೋಜಿ ಸಮೀಪದ ರಾಮಪುರ ಮತ್ತು ಕಮ್ಮಟದುರ್ಗಗಳಲ್ಲಿ ಕುಮಾರರಾಮನ ಜಾತ್ರೆ, ಅನೇಕ ಬಿಡಿ ಆಚರಣೆಗಳು ಕಂಡು ಬರುತ್ತವೆ. ಕುಮಾರರಾಮನ ರುಂಡದ ಮೆರವಣಿಗೆ, ಪೂಜೆ, ಯುದ್ಧದ ಅಣುಕು ಇತ್ಯಾದಿಗಳು ಇಲ್ಲಿ ಇನ್ನೂ ಜೀವಂತವಾಗಿವೆ. ನಾಡಿನ ಅನೇಕ ಕಡೆಗಳಲ್ಲಿ ರಾಮಸ್ವಾಮಿ, ಕುಮಾರರಾಮದೇವರು, ರಾಮೇಶ್ವರ ಹೆಸರುಗಳಿಂದ ಈತ ಪೂಜೆಗೊಳ್ಳುತ್ತಲಿದ್ದಾನೆ.

## ವ್ಯಾಪ್ತಿ

ಮಧ್ಯ (ಯುಗದ) ಕಾಲಿನ ಪರಂಪರೆಯಲ್ಲಿ ಜನಪದ ಸಾಂಸ್ಕೃತಿಕ ನಾಯಕನಾದ ಕುಮಾರರಾಮನ ಪರಂಪರೆ ಉತ್ತರ ಕರ್ನಾಟಕದ ಬಹು ಭಾಗಗಳಲ್ಲಿ ಒಂದು ಪಂಥವಾಗಿ ಬೆಳೆದಿದೆ ಹದಿನಾರನೇಯ ಶತಮಾನದ ನಂಜುಂಡ ಕವಿಯು ಕುಮಾರರಾಮನ ಸಾಂಗತ್ಯ ಕಾವ್ಯವನ್ನು ಗಮನಿಸಿದರೆ ಆ ಕಾಲಕ್ಕಾಗಲೇ ಈ ಪಂಥವು ನಮ್ಮ ಶಿಷ್ಟ ಕವಿಗಳ ಮೇಲೆ ಪ್ರಭಾವ ಬೀರಿರುವುದು ಮನದಟ್ಟಾಗುತ್ತದೆ. ಈ ಮೂಲಕ ಜನಪದರ ಸ್ಮೃತಿಕೋಶದಲ್ಲಿ ಮೈತಳೆದ ಕುಮಾರ ರಾಮ ಶಿಷ್ಟಸಾಹಿತ್ಯಗಳನ್ನು ಕೃತಿ ರಚನೆಗೆ ಪ್ರೇರಪಿಸಿದುದೂ ಉಂಟು. ಹಾಗಾಗಿ ಕುಮಾರರಾಮನು ಮೌಖಿಕ ಪರಂಪರೆಯಲ್ಲಿಯು ಗ್ರಂಥಸ್ಥ ಸಾಹಿತ್ಯದಲ್ಲಿಯೂ ನಾಟಕ, ಕಾದಂಬರಿ, ಕಾವ್ಯ ಮೊದಲಾದ ಬೇರೆ ಬೇರೆ ಪ್ರಕಾರಗಳಲ್ಲಿ ಅಭಿವ್ಯಕ್ತಿಗೊಂಡಿದ್ದಾನೆ. ಹೀಗೆ ಕುಮಾರರಾಮನ ಪ್ರಾಮುಖ್ಯತೆಯನ್ನು ಗುರಿತಿಸುವ ಹಲವಾರು ಅಧ್ಯಯನಗಳು ನಡೆಯಬೇಕಾಗಿದೆ. ಬಸವಣ್ಣನಂತಹ ವಚನಕಾರನ ಬಗ್ಗೆ ಈಗಾಗಲೇ ಹಲವಾರು ಅಧ್ಯಯನಗಳಾಗಿವೆ, ಆದರೆ ಮಧ್ಯಕಾಲೀನ ಕರ್ನಾಟಕದ ಪ್ರಾದೇಶಿಕ ಇತಿಹಾಸದಲ್ಲಿ ಪ್ರಮುಖನಾದ ಕುಮಾರರಾಮನ ಬಗ್ಗೆ ಹಲವಾರು ಶಿಷ್ಟ ಕಾವ್ಯಗಳು ರಚಿತವಾಗಿವೆ. ಶ್ರೀನಿವಾಸಜೊಯೀಸರ ಪ್ರಕಾರ ಕುಮಾರರಾಮನನ್ನು ಕುರಿತು ಕಾವ್ಯ ಬರೆದವರು

ಐದು ಜನ. 1 ನಂಜುಂಡ ಕವಿ. 2. ಪಾಂಚಾಳಗಂಗ 3.ನಾಗಸಂಗಯ್ಯ 4. ಗಂಗ ಮತ್ತು 5. ಮಹಾಲಿಂಗಸ್ವಾಮಿ ಹಾಗೆಯೇ ಜನಪದ ವಾಡಿಕೆಯಲ್ಲಿರುವ ಕುಮಾರರಾಮನ ಸಾಹಿತ್ಯವನ್ನು ಶ್ರೀವರದರಾಜರಾವ್, ಡಾ.ಕೆ.ಎಂ.ಮೈತ್ರಿ ಮತ್ತು ಗದ್ದಗೀಮಠರು ಕುಮಾರರಾಮನ ಕಥೆಯನ್ನು ಸಂಪಾದಿಸಿದ್ದಾರೆ. ಹೀಗೆ ಜನಪದ ಸಾಹಿತ್ಯ ಮತ್ತು ಶಿಷ್ಟಸಾಹಿತ್ಯದಲ್ಲಿ ರಚಿತವಾಗಿರುವ ಸಾಹಿತ್ಯದ ತೌಲನಿಕ ಅಧ್ಯಯನ ಮಾಡಿ ಶಿಷ್ಟಸಾಹಿತ್ಯ ಮತ್ತು ಜನಪದಸಾಹಿತ್ಯದಲ್ಲಿರುವ ಬೇರೆ ಬೇರೆ ನೆಲೆಗಳನ್ನು ಶೋಧಿಸುವ ಪ್ರಯತ್ನ ಈ ಪ್ರಬಂಧವಾಗಿದೆ.

ಐತಿಹಾಸಿಕ ವ್ಯಕ್ತಿಯಾಗಿ ಚಿತ್ರಿತವಾಗಿರುವ ಕುಮಾರರಾಮನು ಸದ್ಗುಣ ಚಾರಿತ್ರ್ಯಗಳಿಗೆ ಹೆಸರುವಾಸಿಯಾದವನು. ಇಂದಿಗೂ ಜನಮನದಲ್ಲಿ ಕುಮಾರಸ್ವಾಮಿಯಾಗಿ ಪೂಜನೀಯವಾಗಿರುವ ಜನಪದರ ಜನಮನಗಳಲ್ಲಿ ಆರಾಧ್ಯದೈವವಾಗಿರುವ ಕುಮಾರರಾಮನ ಪಾತ್ರದ ವಿಶ್ಲೇಶಣೆಯಾಗಿದೆ.

ನಾಡಿಗಾಗಿ ದುಡಿದು ಮಡಿದ ವೀರನನ್ನು ನೆನೆಯುವ, ಪೂಜಿಸುವ, ಆರಾಧಿಸುವ ಅವನ ಕೀರ್ತಿಯನ್ನು ಹೊಗಳುವ ಪದ ಕಟ್ಟಿ ಹಾಡುವ ಮತ್ತು ವರ್ಣಿಸುವುದು ಶಿಷ್ಟ ಮತ್ತು ಜನಪದ ಸಾಹಿತ್ಯಗಳೆರಡರಲ್ಲಿಯೂ ಕಾಣಬಹುದು.ಈ ಎರಡೂ ಸಾಹಿತ್ಯಗಳಲ್ಲಿ ಕುಮಾರರಾಮನ ಬಗ್ಗೆ ವ್ಯಕ್ತವಾಗಿರುವ ಮನೋಭಾವನೆಯನ್ನು ಗುರುತಿಸುವುದು. ಈ ಸಾಹಿತ್ಯಗಳಲ್ಲಿ ಕುಮಾರರಾಮನು ಪಡೆದ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸುವುದು.

# ಅಧ್ಯಾಯ – 2

## ಶಿಷ್ಟ ಸಾಹಿತ್ಯದಲ್ಲಿ ಕುಮಾರ ರಾಮ

ಕುಮಾರ ರಾಮನನ್ನು ಕುರಿತು ಪ್ರಾಸಂಗಿಕ ಉಲೇಖದ ಕಾವ್ಯಗಳೂ, ಸ್ವತಂತ್ರ ಕಾವ್ಯಗಳೂ ಕಂಡು ಬರುತ್ತದೆ. ಚೆನ್ನ ಬಸವ ಪುರಾಣ, ಇಮ್ಮಡಿ ಚಿಕ್ಕ ಭೂಪಾಲನ ಸಾಂಗತ್ಯ, ನವರತ್ನ ಮೂಲಿಕೆ ಮೊದಲಾದ ಕೃತಿಗಳಲ್ಲಿ ಕುಮಾರರಾಮನ ಪ್ರಾಸಂಗಿಕ ಪ್ರಸ್ತಾಪ ಬರುತ್ತದೆ.

ನೇರವಾಗಿ ಕುಮಾರರಾಮನನ್ನು ಕುರಿತು ಹುಟ್ಟಿದ ಕಾವ್ಯಗಳ ಸಂಖ್ಯಾನಿರ್ಣಯ ಇನ್ನು ಚರ್ಚೆಯ ವಿಷಯವಾಗಿಯೇ ಉಳಿದಿದೆ. ಈ ವಿಷಯವಾಗಿ ಮೊದಲು ತಲೆ ಕೆಡಿಸಿಕೊಂಡವರು ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಅವರ ಪ್ರಕಾರ ಈತನನ್ನು ಕುರಿತು ಕಾವ್ಯಬರೆದವರು ಐದು ಜನ, 1. ನಂಜುಂಡ, 2.ಪಂಚಾಳಗಂಗ, 3.ನಾಗಸಂಗಯ್ಯ, 4.ಗಂಗ, 5.ಮಹಾಲಿಂಗಸ್ವಾಮಿ. ಈ ಸಮಸ್ಯೆಯನ್ನು ಪಿಎಚ್.ಡಿ., ಅಧ್ಯಯನದ ಮೂಲಕ ಸಮಗ್ರವಾಗಿ ಕೈಗೆತ್ತಿಕೊಂಡು ಡಾ. ವರದರಾಜರಾವ್ ಅವರು ಪಾಂಚಾಳಗಂಗ, ಗಂಗ, ನಾಗಸಂಗಯ್ಯ ಹೆಸರಿನಲ್ಲಿರುವ ಕೃತಿಗಳು ಒಂದೇ ಪಠ್ಯದ ವಿಸ್ತೃತ ಸಂಕೋಚ ಆವೃತ್ತಿಗಳೆಂದು ಹೇಳುತ್ತ, ಇವುಗಳ ಸಂಖ್ಯೆಯನ್ನು ಐದರಿಂದ ಮೂರಕ್ಕೆ ಇಳಿಸಿದ್ದಾರೆ.

ಈ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನ ಮಾಡಿದ ಡಾ.ಎಂ.ಎಂ. ಕಲಬುರ್ಗಿ ಮತ್ತು ವೀರಣ್ಣ ರಾಜೂರರಿಗೆ ಮೇಲುಕೋಟೆಯ, ಸಂಸ್ಕೃತ ಸಂಶೋಧನ ಸಂಸತ್‌ನಲಿ ಹಳೆಯ ಕುಮಾರರಾಮನ ಸಾಂಗತ್ಯ, ಹೆಸರಿನ ತಾಳೆಗರಿ ಪ್ರತಿ(1), ಕಂಪಲಿಯ ಶ್ರೀ ದೊಡ್ಡನಗೌಡರ ಮನೆಯಲ್ಲಿ ಹೊಸ ಕುಮಾರರಾಮನ ಸಾಂಗತ್ಯ 2 ಹೆಸರಿನ ಕಾಗದ ಪ್ರತಿ ಲಭ್ಯವಾಗಿವೆ.

ಈ ವರೆಗೆ ಕುಮಾರರಾಮನನ್ನು ಕುರಿತು 5 ಕೃತಿಗಳು ಹುಟ್ಟಿವೆ.

1. ಹಳೆಯ ಕುಮಾರರಾಮನ ಸಾಂಗತ್ಯ–ಪಾಂಚಾಳ ಗಂಗ
2. ಹೊಸ ಕುಮಾರರಾಮನ ಸಾಂಗತ್ಯ–?
3. ಕೊಮಾರ ರಾಮಯ್ಯನ ಚರಿತೆ–?

4. ಬಾಲರಾಮನ ಸಾಂಗತ್ಯ- ಮಹಾಲಿಂಗ ಸ್ವಾಮಿ
5. ರಾಮನಾಥ ಚರಿತೆ-ನಂಜುಂಡ

**ಈ ಎರಡು ಪ್ರತಿಗಳ ವಿವರ ಹೀಗಿದೆ**

**ಮೇಲುಕೋಟೆ ಸಂಸ್ಕೃತ ಸಂಶೋಧನ ಸಂಸತ್ ಪ್ರತಿ.**

ಸಂಧಿ

1. ದೇವಗಿರಿ ಯಾದವರಲ್ಲಿ ಮುಮ್ಮಡಿಸಿಂಹ.
2. ರಾಯದುರ್ಗದಲ್ಲಿ ಮುಮ್ಮಡಿಸಿಂಗ-ಕಂಪಿಲ
3. ಕುಮಾರರಾಮನ ಜನನ-ಹೊಸಮಲೆಯಲ್ಲಿ ಕಂಪಿಲ
4. ಗುತ್ತಿ ಜಗದಪ್ಪನೊಂದಿಗೆ ಕಾಳಗ
5. ಓರುಗಲ್ಲು ಪ್ರವೇಶ-ಯುದ್ಧ
6. ಶೂಲದ ಹಬ್ಬ
7. ನೀರಾಟ-ಚಂಡಿನಾಟ
8. ನೆಲಮಾಳಿಗೆಯಲ್ಲಿ ಕುಮಾರರಾಮ
9. ನೇಮಿಯ ದಾಳಿ
10. ಮಾದಿಗಿತ್ತಿಯ ದಾಳಿ

**ಕಂಪಲಿ ಶ್ರೀ ದೊಡ್ಡನ ಗೌಡರ ಪ್ರತಿ**

ಸಂಧಿ

1. ದೇವಗಿರಿಯಲ್ಲಿ ಮುಮ್ಮಡಿಸಿಂಗನಿಂದ ರಾಜಸೇವೆ
2. ರಾಯದುರ್ಗದಲ್ಲಿ ಮುಮ್ಮಡಿಸಿಂಗ- ಕಂಪಿಲ
3. ಹೊಸ ಮಲೆಯಲ್ಲಿ ಕಂಪಿಲನ ರಾಜ್ಯಭಾರ
4. ಗುತ್ತಿಯ ಜಗದಪ್ಪನೊಡನೆ ಯುದ್ಧ
5. ಕುಮಾರರಾಮ ಓರುಗಲ್ಲು ಪ್ರವೇಶಿಸಿದುದು.
6. ಓರುಗಲ್ಲ ಯುದ್ಧ- ಬೊಲ್ಲನನ್ನು ತಂದುದು
7. ಶೂಲದ ಹಬ್ಬ- ರತ್ನಾಜಿ ವ್ಯಾಮೋಹ
8. ಕಮ್ಮಟದುರ್ಗ ನಿರ್ಮಾಣ
9. ನೀರಾಟ- ಚೆಂಡಿನಾಟ- ರತ್ನಿಯ ಮೋಹ
10. ನೆಲಮಾಳಿಗೆಯಲ್ಲಿ ಕುಮಾರರಾಮ

11. ನೇಮಿಯ ಕಾಳಗ– ಸೋಲು
12. ಮಾದಗತ್ತಿ– ಕಾಳಗ– ರಾಮನ ವೀರಮರಣ

ಈ ಎರಡು ಕೃತಿಗಳಲ್ಲಿ ಸ್ವಲ್ಪ ವ್ಯತ್ಯಾಸ ತಕ್ಕ ಮಟ್ಟಿಗೆ ಸ್ಪಷ್ಟವಾಗುತ್ತದೆ. ಹಳೆಯ ಕುಮಾರ ರಾಮನ ಸಾಂಗತ್ಯದ ಕಥೆ ನೇರವಾಗಿದೆ. ಹೊಸ ಕುಮಾರರಾಮನ ಸಾಂಗತ್ಯದ ಆರಂಭದಲ್ಲಿ ಮುಮ್ಮಡಿಸಿಂಗನು ದೇವಗಿರಿಯಾದವರಲ್ಲಿ ರಾಜಸೇವೆಗೆ ನಿಂತನೆಂಬ, ಅಲ್ಲಿಂದ ಮಲೆಪಲ್ಲಿ ದೇಶದ ರಾಯದುರ್ಗದಲ್ಲಿ ಆಳಿದನೆಂಬ, ಎರಡು ಸಂಧಿಗಳನ್ನು ಸೇರಿಸುವುದರ ಮೂಲಕ ಸ್ವಲ್ಪ ಹಿಂದಕ್ಕೆ ಕೊಂಡೊಯ್ಯಲಾಗಿದೆ. ಬಹದೂರನು ಕಮ್ಮಟಕ್ಕೆ ಬಂದ ವಿವರವನ್ನು ಶೂಲದ ಹಬ್ಬದ ವಿವರವನ್ನು ಹೊಸದಾಗಿ ಸೇರಿಸಲಾಗಿದೆ. ಕಮ್ಮಟ ದುರ್ಗದ ವರ್ಣನೆ ಹಳೆಯ ಕುಮಾರರಾಮನ ಸಾಂಗತ್ಯದಲ್ಲಿ ಎರಡನೆಯ ಸಂಧಿಯಾಗಿ ಬಂದರೆ ಹೊಸ ಕುಮಾರರಾಮನ ಸಾಂಗತ್ಯದಲ್ಲಿ ಎಂಟನೇಯ ಸಂಧಿಯಾಗಿ ಬಂದಿದೆ.

ಕುಮಾರರಾಮನನ್ನು ಕುರಿತು ಶಿಷ್ಟಸಾಹಿತ್ಯದಲ್ಲಿ ಬಂದಿರುವ ಐದು ಕೃತಿಗಳಲ್ಲಿ ವಿವರಗಳು ಸ್ವಲ್ಪ ಭಿನ್ನವಾಗಿ ರಚಿತವಾಗಿದೆ.

ಹೊಸ ಕುಮಾರರಾಮನ ಸಾಂಗತ್ಯದಲ್ಲಿ ಕುಮಾರರಾಮನ ಜೀವನಚಿತ್ರಣ ಈ ರೀತಿಯಾಗಿ ಮೂಡಿಬಂದಿದೆ.

## ಸಂಧಿ–1

ಬೇಡ ಜಾತಿಯ ಮುಮ್ಮಡಿಸಿಂಗನು ಮಲೆಪಲ್ಲಿ ದೇಶದಲ್ಲಿ ತಳವಾರ ನಾಗಿದ್ದನು. ಊರ ಹಂಚಿ ಕೊಳ್ಳುವ ವಿಷಯಯವಾಗಿ ತನ್ನ ದಾಯಾದಿಗಳೊಂದಿಗೆ ಜಗಳ ಮಾಡಿಕೊಂಡು, ಆ ಪ್ರದೇಶ ಬಿಟ್ಟು ತನ್ನ ಹೆಂಡತಿಯೊಂದಿಗೆ ದೇವಗಿರಿಗೆ ಹೋಗಿ ಸೇವುಣರ ದೊರೆ ರಾಮದೇವರಾಯನ ಸೇವೆಯಲ್ಲಿ ತೊಡಗಿದನು. ದಿನ ಕಳೆದಂತೆ ದಾಯಾದಿಗಳು ಸಿಂಗನಾಯಕನಲ್ಲಿಗೆ ಬಂದರು, ಅವರನ್ನು ಕ್ಷಮಿಸಿದನು ಎಲ್ಲಾರೂ ಒಂದಾಗಿ ಬೇಟೆಗೆ ಹೋದಾಗ ಬಂಗಾರ ಬಣ್ಣದ ಉಡವೊಂದು ಹುತ್ತದೊಳಗೆ ಹೋಗಲು ಆ ಹುತ್ತವನ್ನು ಅಗಿದರ, ಬಂಗಾರ ಕೊಪ್ಪರಿಗೆ ದೊರೆಯಿತು. ಅಲ್ಲಿಯೇ ಮನೆ ಕಟ್ಟಿ ಕೊಂಡರು. ಸಿಂಗನಾಯಕನಿಗೆ ಮಕ್ಕಳಿಲ್ಲಿದ ಕಾರಣ ಕಂಪಲಿಯ

ಸೋಮೇಶ್ವರನ ಕೃಪೆಯಿಂದ ಒಬ್ಬ ಮಗನು ಜನಿಸಿದನು. ಅವನಿಗೆ ಕಂಪಿಲರಾಯ ಎಂದು ಹೆಸರಿಡಲಾಯಿತು. ಕಂಪಿಲ ರಾಯನು ವಯಸ್ಸಿಗೆ ಬಂದಾಗ ಗುಜ್ಜಲ ನಾಯಕನೆಂಬುವನ ಮಗಳಾದ ಹರಿಯಾಲ ದೇವಿಯನ್ನು ತಂದು ಮದುವೆ ಮಾಡಿದರು

## ಸಂಧಿ-2

ಮುಮ್ಮಡಿ ಸಿಂಗ ದೇವಗಿರಿ ಬಿಟ್ಟು ಮಲೆಪಲ್ಲಿ ದೇಶಕ್ಕೆ ಬಂದು ರಾಯದುರ್ಗದಲ್ಲಿ ಆಳುತ್ತಲಿದ್ದ ಮಲ್ಲರಾಯನ ಕೈಕೆಳಗೆ ನಾಡ ದಳವಾರನಾದನು. ಸ್ವಲ್ಪದಿನದ ನಂತರ ಮಲ್ಲರಾಯ ಮಡಿದನು. ಮಲ್ಲರಾಯನ ಅಳಿಯ ಸೋದರ ಮಲ್ಲನನ್ನು ಹೊರ ಹಾಕಿ ಸಿಂಗನಾಯಕ ರಾಜನಾದನು. ಕಂಪಿಲರಾಯನಿಗೆ ಐದು ಜನ ಮಡದಿಯರನ್ನು ತಂದು ಮದುವೆ ಮಾಡಿದನು. ಹರಿಯಾಲದೇವಿಗೆ ಎಷ್ಟುದಿನವಾದರೂ ಮಕ್ಕಳಾಗಲಿಲ್ಲ ಅದ್ದರಿಂದ ಕಂಪಿಲನು ಸೋಮೇಶ್ವರ ದೇವರನ್ನು ಕಂಡು ವರವನ್ನು ಪಡೆದು ಮರಳುತ್ತಿರುವಾಗ ಅಲ್ಲಿ ಬೆನ್ನಸಿಡಿ, ಬಾಯಬೀಗ, ಅಗ್ನಿಕುಂಡ, ವಗ್ಗಯಗಳ ಉಗ್ಗಡಣೆಗಳಿಂದ ರೆಡ್ಡಿಗಳು ಭೈರವನ ಪರ್ವ ಆಚರಿಸುತ್ತಲಿದ್ದರು. ಈ ಪರ್ವ ನೋಡಲು ಬಂದ ರೆಡ್ಡಿ ಕುಲದ ರತ್ನಾಜಿಯನ್ನು ಮೆಚ್ಚಿ ರತ್ನಾಜಿಯ ಸಂಬಂಧಿಕರಿಗೆ ಎರಡು ಗ್ರಾಮಗಳನ್ನು ಕೊಟ್ಟು ಅವಳನ್ನು ಕರೆದುಕೊಂಡು ಬಂದ. ಹರಿಯಾಲ ದೇವಿ ಮಕ್ಕಳಾಗಲಿಲ್ಲವೆಂದು ಚಿಂತೆಯಲ್ಲಿರುವಾಗ ಊಳಿಗದ ನಾಗಿ ಬರಗಾಲ ಕಾರಣವಾಗಿ ವಲಸೆ ಬಂದಿದ್ದ ಬಡ ತಂದೆ ತಾಯಿಗಳ ಮಗನ ಸುದ್ದಿ ಹೇಳಿದಳು. ಹರಿಯಮ್ಮ ಅವರಿಗೆ ಅನುಕೂಲ ಮಾಡಿಕೊಟ್ಟು 'ಕಾಟ' ಹೆಸರಿನ ಮಗನನ್ನು ಅವರಿಂದ ಪಡೆದಳು ಕಾಟಣ್ಣ ಬೆಳೆಯ ತೊಡಗಿದ.

## ಸಂಧಿ-3

ಕಂಪಿಲರಾಯನ ಮಿಕ್ಕ ಮಡದಿಯರ ಐದು ಜನ ಮಕ್ಕಳು ಸುಖವಾಗಿ ಬೆಳೆಯುತ್ತಿದ್ದರು. ಇತ್ತ ಹರಿಯಾಲದೇವಿ ಜಟ್ಟಿಂಗ ರಾಮನ ದೇವಾಲಯದಿಂದ ತಂದಿದ್ದ ಮಾವಿನ ಹಣ್ಣನ್ನು ತಿಂದಳು ಗರ್ಭಿಣಿಯಾಗಿ ನವಮಾಸ ತುಂಬಿ ಗಂಡು ಮಗುವಿಗೆ ಜನ್ಮವಿತ್ತಳು. ಸಿಪ್ಪೆತಿಂದ ದಾಸಿಗೆ ಒಂದು ಗಂಡು ಮಗು ಜನಿಸಿತು. ಅವನಿಗೆ ರಾಮ ಎಂದು ಹೆಸರಿಡಲಾಯಿತು. ನಂತರ ಕಂಪಿಲ ರಾಯ ತನ್ನ ರಾಜದಾನಿಯನ್ನು ರಾಯದುರ್ಗದಿಂದ ಹೊಸಮಲೆದುರ್ಗಕ್ಕೆ ವರ್ಗಾಯಿಸಿದರು.

ಕುಮಾರರಾಮ ಬೈಚಪ್ಪ ಎಂಬ ಮಂತ್ರಿಯೊಡನೆ ಯುದ್ಧಕ್ಕೆ ಹೋಗಿ ಹಲವಾರು ಪ್ರದೇಶಗಳನ್ನು ಗೆದ್ದು ಹೊಸಮಲೆಗೆ ಮರಳಿದನು.

## ಸಂಧಿ-4

ಕಂಪಿಲರಾಯ ಸಭೆಯಲ್ಲಿದ್ದಾಗ ಗುತ್ತಿಯ ಜಗತಾಪಿ ಕಳಿಸಿದ ಸೇನಾಪತಿಗಳು ಬಂದು ರಾಜನಿಗೆ ಶರಣಾಗಬೇಕೆಂದು ಕೇಳಿಕೊಂಡಾಗ ಕಂಪಿಲ ಅವರನ್ನು ಹೊರ ನೂಕಿದ ಆ ಸುದ್ದಿ ಕೇಳಿ ಜಗತಾಪಿ ಯುದ್ಧಕ್ಕೆ ಬಂದ ಆಗ ಕುಮಾರರಾಮ ಜಗತಾಪಿಯನ್ನು ಸೋಲಿಸಿದನು. ತನ್ನನ್ನು ಓಲೈಸುತ್ತಾ ಬಾಳು-ಎಂದು ತಿಳಿ ಹೇಳಿ, ಕಂಪಿಲ ಜಗತಾಪಿಯನ್ನು ಕಳುಹಿಸಿದ, ಐದು ಜನ ಕುಮಾರರು ಬಂದು, ತಮ್ಮ ಹತ್ತು ಕುದುರೆ ಕಾಣದಾದವು, ನಮಗೆ ರಾಮನೊಡನೆ ಬಾಳಲು ಸಾಧ್ಯವಿಲ್ಲ ಎಂದಾಗ ಕಂಪಿಲನು ರಾಮನಿಗೆ "ನೀನು ಸಮರ್ಥನೇ ಆಗಿದ್ದರೆ ಎಪ್ಪತ್ತು ರಾಯನ ಬೊಲ್ಲ ಕುದುರೆಯನ್ನು ಗೆದ್ದು ಬಾ" ಎಂದು ಸವಾಲು ಹಾಕಿದ, ಆ ಸವಾಲನ್ನು ಸ್ವೀಕರಿಸಿ ಕುದುರೆ ಗೆದ್ದು ತರಲು ಹೋದ.

## ಸಂಧಿ-5

ಕುಮಾರರಾಮ ತಾಯಿಯ ಆಶೀರ್ವಾದ ಪಡೆದು ಕಾಟಣ್ಣ ಮತ್ತು ಸೈನ್ಯದೊಂದಿಗೆ ಓರುಗಲ್ಲಿಗೆ ಪ್ರಯಾಣ ಬೆಳೆಸಿದ. "ಶೂಲನ ಹಬ್ಬ" ಆಚರಿಸುವುದಾಗಿ ಹರಕೆ ಹೊತ್ತ ರಾಮಯ್ಯನ ಕನಸಿನಲ್ಲಿ ಗುಂಡಬ್ರಹ್ಮಯ್ಯ ಬಂದು ವರ ದಯಪಾಲಿಸಿದ ಬೆಳಿಗ್ಗೆ ಎದ್ದು ಕುಮಾರರಾಮ ಸ್ನಾನಮಾಡಿ ದೀಕ್ಷಾಬೋಧೆ ಓದುತ್ತಲಿದ್ದ ಷಡುಸ್ಥಲದವರಿಗೆ ಶರಣುಮಾಡಿ ಓಲಗಕ್ಕೆ ಬಂದು ಗದ್ದುಗೆಯಲ್ಲಿ ಕುಳಿತ ನಂತರ ಅವನು ಹೊರಡುವಾಗ ಹೆಂಗಳೆಯರು ರಾಮನ ರೂಪಕ್ಕೆ ಮರಳಾದರು. ಲಿಂಗ ಮತ್ತು ರಾಮ ಇಬ್ಬರು ಆಸ್ಥಾನಕ್ಕೆ ಬಂದರು ರುದ್ರರಾಜನು ತನ್ನ ಮಗ ಎಪ್ಪತ್ತುರಾಯ ಮತ್ತು ರಾಮಯ್ಯ ಒಂದಾದುದು ತನ್ನ ಸುದೈವವೆಂದು ಭಾವಿಸಿದ.

## ಸಂಧಿ–6

ಈ ಸುದ್ದಿಯನ್ನು ಕೇಳಿದ ರುದ್ರರಾಯ ಸೈನ್ಯ ಕಳುಹಿಸಿದ ರುದ್ರರಾಯನ ಮಗ ಎಪ್ಪತ್ತುರಾಯ ತನ್ನ ಬೊಲ್ಲ ಕುದುರೆಯನ್ನೇರಿ ಯುದ್ಧಕ್ಕೆ ಬಂದು ಕೆಟ್ಟದಿನದಂದು ಹಗಲಿನಲ್ಲಿ ಮಂಗಲರಾಯನ ಲಾಯದಲ್ಲಿ ಈ ಬೊಲ್ಲ ಹುಟ್ಟಿತು. ಇದು ಅಪಶಕುನವೆಂದು ಅವನು ಡಿಲ್ಲಿಯ ಸುರಿತಾಳನಿಗೆ ಒಪ್ಪಿಸಿದ ಕೆಟ್ಟವೇಳೆಯಲ್ಲಿ ಹುಟ್ಟಿದ ಇದನ್ನು ಮಾರಲು ಸುರಿತಾಳ ಹೇಳಿದ ಎಪ್ಪತ್ತುರಾಯ ಇದನ್ನು ಖರೀದಿಸಿದ ಎಂದು ಲಿಂಗಣ್ಣ ರಾಮಯ್ಯನಿಗೆ ಬೊಲ್ಲನ ವೃತ್ತಾಂತ ಹೇಳಿದ ಆಗ ರಾಮನು ಬೊಲ್ಲನನ್ನು ಗೆದ್ದು ಎಪ್ಪತ್ತರಾಯನನ್ನು ಕೈವಶಮಾಡಿಕೊಂಡ.

## ಸಂಧಿ–7

ರಾಮನ ಸ್ವಪ್ನದಲ್ಲಿ ಗುಂಡಬ್ರಹ್ಮಯ್ಯ ಕಾಣಿಸಿಕೊಂಡು ಶೂಲದ ಮಾಹಾತ್ಮೆ ವಿವರಿಸಿ ಇದರಿಂದ ಪ್ರಭಾವಿತನಾದ ರಾಮನು ತಂದೆಗೆ ಹೇಳಿ ಶೂಲದ ಹಬ್ಬ ಆಚರಿಸಲು ತಿಳಿಸಿದ. ನಂತರ ಹೊಸಮಲೆದುರ್ಗವನ್ನು ನೋಡಲು ಕಂಪಿಲರಾಯ ರತ್ನಾಜಿಯ ಜೊತೆಯಿದ್ದ ಸೇವಕಿಯು, ಒಬ್ಬೊಬರ ಶೂಲಗಳ ಬಗ್ಗೆ ನಾಗಿ ಹೇಳುತ್ತಿದ್ದಳು. ಮುಂದುವರಿದು ರಾಮನ ವಿವರ ಕೇಳುತ್ತಲೇ ಅವನ ರೂಪವನ್ನು ನೋಡಿ ಅವನ ರೂಪಕ್ಕೆ ರತ್ನಾಜಿ ಸೋತು ಹೋದಳು. ಶೂಲದ ಮೆರವಣಿಗೆ ಮುಗಿಯುತ್ತಲೆ ರತ್ನಾಜಿ ಅರಮನೆಗೆ ಹೋಗಿ ವಿರಹದಲ್ಲಿ ಕುದಿಯ ತೊಡಗಿದಳು ನಾಗಿಯ ಹತ್ತಿರ ತನ್ನ ಒಳತೋಟಿಯನ್ನು ಹೇಳಿಕೊಂಡಳು ಯಾರಿಗೂ ಹೇಳ ಬೇಡೆಂದು ಮಾತುಪಡೆದಳು, ಅರಮನೆಯ ಒಳಗೆ, ಹೊರಗಿನ ಉದ್ಯಾನದಲ್ಲಿ ರಾಮನನ್ನು ಹುಚ್ಚಿಯಂತೆ ಹುಡುಕಿದಳು, ಮೈಬಣ್ಣಗೆಟ್ಟಿತು.

## ಸಂಧಿ–8

ರಾಮಯ್ಯ ಶೂಲದ ಹಬ್ಬ ಮುಗಿಸಿ ಬೇಟೆಗೆ ಹೊರಟನು, ಮೊಲವೊಂದು ರಾಮ ಬೆನ್ನಟ್ಟಿದ ನಾಯಿಯನ್ನು ಕಚ್ಚಿ ಅದು ಓಡುತ್ತ ಕಮ್ಮಟಕ್ಕೆ ಬಂದಿತು. ಆ ದುರ್ಗವನ್ನು ಕಂಡು ರಾಮ ಬೆರಗಾದ. ಇದು ತನಗೆ ನೆಲೆಯಾಗಿರಬೇಕೆಂದು ಬಯಸಿದ. ಅಲ್ಲಿಯ ಜೈನರು ಸಿದ್ಧಪಡಿಸಿದ್ದ ಅಡಿಗೆಯನ್ನು ಊಟವಮಾಡಿ, ಮರುಳುವಾಗ ಅಲ್ಲಿ ಮಂಕುಡಿಯನ್ನು ಮರೆತನು. ಅದನ್ನು ತರಲು ಹೋದ ಸೇವಕನು "ನೀವು ಊಟಕ್ಕೆ ಕುಳಿತಿದ್ದ ಜಾಗವನ್ನು ಜೈನರು ತೊಳೆದು ಪವಿತ್ರಗೊಳಿಸುತ್ತಲಿದ್ದಾರೆ" ಎಂದು ಹೇಳಿದನು. ಇದನ್ನು ಕೇಳಿದ ರಾಮ ಸಿಟ್ಟಿಗೆದ್ದು,

ಅಲ್ಲಿಯ ಬಸದಿಗಳಲ್ಲಿ ಕುರಿಕೋಣ ಕೊಯಿಸಿದ. ಇದರಿಂದ ನೊಂದ ಜೈನರು ಅಲ್ಲಿಂದ ಕೊಪ್ಪಳಕ್ಕೆ ಗುಳೆ ಬಂದರು. ರಾಮಯ್ಯ ಕಮ್ಮಟವನ್ನು ರಾಜಧಾನಿಯನ್ನಾಗಿ ರೂಪಿಸಿಕೊಂಡ. ಓಲೆ ಬರೆದು, ತಂದೆ ಮತ್ತು ಸಕಲ ಪರಿವಾರದವರನ್ನು ಕರೆಸಿದ. ರತ್ನಾಜಿಯೂ ಬಂದಳು. ರಾಮನನ್ನು ನೋಡಬೇಕೆಂದು ಅಡಿಯಿಂದ ಮುಡಿಯವರಂಗೂ ಶೃಂಗರಿಸಿಕೊಂಡು, ಹಂಪಾಜಿಯ ಹಸ್ತ ಸಹಾಯದೊಂದಿಗೆ ಉಪ್ಪರಿಗೆ ಏರಿದಳು. ಶಂಭುರಾಯನ ಕುದುರೆಯನ್ನು ತಂದ ಗಡಿಯ ಭೋಗಣ್ಣ, ಗುತ್ತಿಯ ಜಗತಾಪಿಯನ್ನು ಘಾಸಿ ಮಾಡಿದ ಕತ್ತಲೆ ರಾಯನ ಮಗನು, ಚೌರದ ಗಂಗ, ಲಕ್ಕ, ದೇವಿಶೆಟ್ಟಿಯ ಲಿಂಗ, ಬಾದೂರಖಾನ, ಸಂಗಮ, ಅಕ್ಕಸಾಲೇರಚಿಕ್ಕ, ಮಂತ್ರಿಕುಮಾರ, ಹುಳಿಯಾರ ಮಾರಗೊಂಡನ ಮಗ, ಕೊಪ್ಪಳದ ತಿಮ್ಮರಾಜು, ಗುಡಿಕೋಟೆ ತಿಮ್ಮರಾಜು, ದೇವದುರ್ಗದ ರಾಯನ ಮಗ ಇವರನ್ನು ಸಂಗಾಜಿ ಒಂದೊಂದಾಗಿ ತೋರಿದಳು. "ಅವರಿವರನು ಬೇಡ, ರಾಮನನ್ನು ತೋರು" ಎಂದು ರತ್ನಾಜಿ ಕೇಳುತ್ತಲೇ ಅವನನ್ನು ಬೆರಳಿಟ್ಟು ತೋರಿಸಿದಳು. ಕಾಣುತ್ತಲೇ ರತ್ನಾಜಿ ಮುದಿ ಕಂಪಿಲನನ್ನು ಶಪಿಸಿ, ಯುವ ರಾಮನನ್ನು ಕಣ್ತುಂಬ ನೋಡಿದಳು.

## ಸಂಧಿ- 9

ಒಂದು ದಿನ ರಾಮನಾಥನು ನೀರಾಟವಾಡಲು ಬಯಸಿ ಹರಿಗೋಲನ್ನು ತರಿಸಿ ತುಂಗ ಭದ್ರೆಗೆ ತೆರಳಿದ. ಹಂಸರಾಜ, ಕೆಂಪರಾಜ, ತಿಮ್ಮರಾಜ, ಕಾಟಣ್ಣ ಮುಂತಾದವರೊಂದಿಗೆ ನೀರನ್ನು ಪ್ರವೇಶಿಸಿ ಒಬ್ಬರ ಮೇಲೊಬ್ಬರ ಮೇಲೆ ನೀರೆರಚಿ ಸಂತೋಷಪಟ್ಟರು. ವಿರೂಪಾಕ್ಷನಿಗೆ ವಂದಿಸಿ ಮನೆಗೆ ಬಂದು ಊಟ ಮಾಡಿ ತನ್ನ ಮಡದಿಯರೊಂದಿಗೆ ತೂಗು ಮಂಚದಲ್ಲಿ ಮಲಗಿದ, ಚೆಂಡಾಟವಾಡಬೇಕೆಂದು ಮನಸ್ಸಾಗಿ ತನ್ನ ತಾಯಿ ಹರಿಯಾಳದೇವಿಯಲ್ಲಿ ಚೆಂಡನ್ನು ಕೇಳಲು ಹೋದಾಗ ಬೇಡ ಎನ್ನುತ್ತಾಳೆ.ಹಠ ಮಾಡಿ ತಾಯಿಯಿಂದ ಚೆಂಡನ್ನು ಪಡೆದು ಆಟವಾಡಲು ಹೋದಾಗ ಚೆಂಡು ರತ್ನಾಜಿ ಇದ್ದ ಉಪ್ಪರಿಗೆಯಲ್ಲಿ ಬೀಳುತ್ತದೆ. ಕಾಟಣ್ಣ ಚೆಂಡು ಕೇಳಲು ಹೋದಾಗ ರಾಮನೇ ಬರಲಿ ಎಂದು ಹೇಳುತ್ತಾಳೆ. ರಾಮನೇ ಚೆಂಡು ಕೇಳಲು ಹೋದಾಗ ತನ್ನ ಮನದ ಆಸೆಯನ್ನು ರಾಮನಿಗೆ ಹೇಳಿದಳು. ನೀನು ತಾಯಿ ನಾನು ಮಗ ಎಂದು ಹೇಳಿ ಕೊಸರಿಕಂಡು ಹೊರಬಂದ. ಕಂಪಿಲನಿಂದ ದೊಡ್ಡ ಗೌರವ ಸಿಗುವಂತೆ ಮಾಡುವೆ, ಕಂಪಿಲನನ್ನು ಕೊಲ್ಲಿಸಿ ನಿನಗೆ ಪಟ್ಟ ಕಟ್ಟುವೆ. ಒಪ್ಪಿಕೊ ಎಂದು ಬಲವಂತ ಮಾಡುತ್ತಾಳೆ. ಇದನ್ನು ಲೆಕ್ಕಿಸದೆ ಕುಮಾರರಾಮ ಅವಳನ್ನು ತಳ್ಳಿದ. ಅಪಮಾನಿತಳಾದ ರತ್ನಾಜಿ ರಾಮನನ್ನು ಕೊಲ್ಲಿಸಲು ನಿಶ್ಚಯಿಸಿದಳು.

## ಸಂಧಿ– 10

ರಾಮನಿಂದ ಅತ್ಯಾಚಾರಕ್ಕೊಳಗಾದವಳಂತೆ ತಲೆಗೂದಲನ್ನು ಕೆದರಿಕೊಂಡು ಕುಪ್ಪಸ ಸೀರೆ ಹರಿದುಕೊಂಡು ಅಳುತ್ತಾ ಮಲಗಿದಳು. ಕಂಪಿಲ ಬೇಟೆಯಿಂದ ಮರಳಿ ಮನೆಗೆ ಬಂದಾಗ ತನ್ನ ಮುದ್ದಿನ ಮಡದಿ ದುಃಖದಲ್ಲಿ ಮಲಗಿರುವುದನ್ನು ಕಂಡು ಕಂಗಾಲಾದ ರಾಮನಿಂದ ಅತ್ಯಾಚಾರಕ್ಕೆ ಒಳಾಗಾದನೆಂದು ದುಃಖಿಸುತ್ತಾ ವಿಷಯ ತಿಳಿಸಿದಳು. ಮನ ನೊಂದ ಕಂಪಿಲರಾಯ ಬೈಚಪ್ಪನನ್ನು ಕರೆಸಿ ರಾಮನನ್ನು ಕೊಲ್ಲಲು ಆದೇಶಿಸಿದನು. ಬೈಚಪ್ಪನಿಗೆ ದಾರಿ ಕಾಣದೆ ರಾಮನಿಗೆ ವಿಷಯ ತಿಳಿಸಿ ರಾಮನನ್ನು ಐದು ಜನ ಸ್ನೇಹಿತರನ್ನು ನೆಲಮಾಳಿಗೆಯಲ್ಲಿರಿಸಿ, ಕಳ್ಳರಾಮನ ತಲೆಯನ್ನು ತಂದು ತೋರಿಸಿದರು ಕಂಪಿಲ ಇದರಿಂದ ದುಃಖಿತನಾದನು ರತ್ನಾಜಿ ಸಂತೋಷಗೊಂಡಳು. ರಾಮನ ಹೆಂಡತಿಯರು ತನ್ನ ಪತಿಯ ಸಾವನ್ನು ಸಹಿಸಲಾಗದೆ ತಾವು ಚಿತೆಯೇರಲು ಸಿದ್ಧರಾದರು ಬೈಚಪ್ಪ ಇವರಿಗೆ ಬುದ್ಧಿವಾದ ಹೇಳಿ ಆರು ತಿಂಗಳು ತಡೆದರು.

## ಸಂಧಿ–11

ಕುಮಾರರಾಮನು ಸತ್ತ ವಿಷಯ ದಿಲ್ಲಿ ತಲುಪಿತು ದಂಡೆತ್ತಿ ಹೋಗಲು ಸುರಿತಾಳು ನೇಮಿಖಾನನಿಗೆ ಆಜ್ಞೆ ಮಾಡಿದ ತನ್ನ ಸೈನಿಕರನ್ನು ಕಳುಹಿಸಿ ರಾಮ ಸತ್ತ ವಿಷಯವನ್ನು ಖಚಿತ ಪಡಿಸಿಕೊಂಡ. ನೇಮಿಖಾನನ ಮುಂದಾಳತ್ವದಲ್ಲಿ ಕಮ್ಮಟದ ಮೇಲೆ ದಂಡೆತ್ತಿ ಬಂದನು, ಇದನ್ನು ಕಂಡು 'ಕಂಪಿಲನು ರಾಮನನ್ನು ಕಳೆದುಕೊಂಡು ಮೂರ್ಖತನ ಮಾಡಿದೆ', ಎಂದು ಚಿಂತಿಸಿದನು. ಬೈಚಪ್ಪ ಸೈನ್ಯವನ್ನು ಸಿದ್ದಗೊಳಿಸಿದನು ಯುದ್ಧ ಮುನ್ನೆಡೆಯಿತು ಸುರಿತಾಳನ ಸೈನ್ಯ ಸಂಘಟಿತವಾಗಿ ಕಮ್ಮಟವನ್ನು ಮುತ್ತಿಗೆ ಹಾಕಿತು, ಆಗ ಬೈಚಪ್ಪ ರಾಮನಿಗೆ ಸರಿಮಿಗಿಲಾದ ರಾಹುತನನ್ನು ಕರೆತರುವೆ ಎಂದು ಹೇಳಿ ನೆಲಮಾಳಿಗೆಯಲ್ಲಿದ್ದ ರಾಮನನ್ನು ಕರೆ ತಂದನು. ಬೊಲ್ಲವನ್ನೆರಿ ಬಂದ ರಾಮನನ್ನು 'ಕಲ್ಯಾಣದ ರಾಹುತ ಎಂದು ಪ್ರಚಾರಮಾಡಿದರು' ಬೈಚಪ್ಪ ಸೈನ್ಯ ಸಂಘಟಿಸಿದ ತುರುಕರು ರಾಮನ ಕಾಳಗವನ್ನು ಎದುರಿಸದಾದರು. ಕಂಪಿಲನ ಮುಂದೆ ರಾಮನನ್ನು ನಿಲ್ಲಿಸಿದಾಗ ಮಗನನ್ನು ಕಂಡು ತಾನು ಮಾಡಿದ ಹೀನ ಕಾರ್ಯವನ್ನು ಅಳಿದು ಕೊಂಡು ಮಗನನ್ನು ಮುದ್ದಾಡಿಸಿದನು. ಇತ್ತ ಸುದ್ದಿ ತಿಳಿದ ಹರಿಯಾಲ ದೇವಿ ರಾಮನ ಮಡದಿಯರು ಹರ್ಷಗೊಂಡು ಬೈಚಪ್ಪನಿಗೆ ಕೃತಜ್ಞತೆ ಹೇಳಿದರು. ಈ ಸುದ್ದಿ ತಿಳಿದ ರತ್ನಾಜಿ ನೇಣು ಹಾಕಿಕೊಂಡು ಸತ್ತಳು. ಕಂಪಿಲನು ರತ್ನಾಜಿಯನ್ನು ಕತ್ತೆ ಕಾಲಿಗೆ ಕಟ್ಟಿ ಎಳೆಯಲು

ಹೇಳಿದನು ಆದರೆ ರಾಮ ಒಪ್ಪದೆ ಶವವನ್ನು ನೆಲದಲ್ಲಿ ಹೂಳಿಸಿದ. ಕುಮಾರ ರಾಮನ ದೊಡ್ಡಗುಣ ವ್ಯಕ್ತವಾಗುತ್ತದೆ.

## ಸಂಧಿ–12

ಕುಮಾರ ರಾಮನು ಬದುಕಿರುವ ಸುದ್ದಿ ದಿಲ್ಲಿಯ ಸುರಿತಾಳನಿಗೆ ತಲುಪಿತು. ನೇಮಿಖಾನನ ಮೇಲೆ ಕೋಪಗೊಂಡು ಮಾದಿಗಿತ್ತಿಯನ್ನು ಕರೆಸಿ(ಮಾತಂಗಿ) ಮತ್ತೆ ಸೈನ್ಯ ಸಜ್ಜುಗೊಳಿಸಿ ಕಮ್ಮಟಕ್ಕೆ ಕಳುಹಿಸಲಾಯಿತು. ಜಾನಿಕಲ್ಲುದುರ್ಗದಲ್ಲಿ ಮಾತಂಗಿ ಬೀಡು ಬಿಟ್ಟಳು. ಬಳಿಕ ಸೈನ್ಯ ಕಮ್ಮಟವನ್ನು ಮುತ್ತಿತು. ರಾಮಯ್ಯ ಯುದ್ಧ ನಿರತನಾದ ಹಗಲು–ರಾತ್ರಿ ಹೋರಾಟ ನಡೆಯಿತು. ಘೋರ ಯುದ್ಧ ಆರಂಭವಾಯಿತು. ರಣರಂಗದಲ್ಲಿ ಹೆಣಮಯವಾಯಿತು ಮಾತಂಗಿ ಸೋತು ಗಾವುದ ಹಿಂಜರಿದಳು.

ಅಷ್ಟರಲ್ಲಿ "ನವಲಕ್ಕ ತೆಲುಗರ ಗಂಡ" ಬಿರುದು ತಮಗೆ ಅವಮಾನವೆಂದು ಬಗೆದು ರಾಮನನ್ನು ಕೊಲ್ಲಿಸಲು ನಿರ್ಣಯಿಸಿದರು. ಕೋಟೆ ಬಾಗಿಲು ತೆಗೆದು ಕೊಡುವುದಾಗಿ ಮಾತಂಗಿಗೆ ಹೇಳಿದರು.ಮಾತಂಗಿ ಮತ್ತೆ ಸೈನ್ಯ ಸಜ್ಜುಗೊಳಿಸಿ ಕೊಂಡು ಸಿದ್ಧಳಾಗಿ ಏರಿ ಬಂದಳು ಒಳಕೋಟೆಯನ್ನು ಮುತ್ತಿಗೆ ಹಾಕಿದಳು. ಒಳಕೋಟೆ ಕೈಬಿಟ್ಟಿತು. ಅಷ್ಟರಲ್ಲಿ ತನ್ನ ಕಡೆಯ ನಲ್ಲಿನಾಗ, ಬಿಲ್ಲ, ಸೋಮ, ಮೀನಗ ಸಿಂಗ, ಬುಕ್ಕಿ ನಾಯಕ, ಕಲ್ಲಿಕೋಟೆಯ ಚಿಕ್ಕ, ಮಾದಿಗರ ಹಂಪ, ಅಕ್ಕಸಾಲಿಗರ ಚಿಕ್ಕ ಇವರೆಲ್ಲ ಸತ್ತರು.

ರಾಮ ತನ್ನ ಹೆಂಡಿರಿಂದ 'ಮಾಸ್ತಿ' ಯಾಗುವ ಭರವಸೆ ಪಡೆದು ಕಾಟಣ್ಣನೊಂದಿಗೆ ಯುದ್ಧಕ್ಕೆ ನಡೆದ ಅಷ್ಟರಲ್ಲಿ ತನ್ನ ಕಡೆಯ ನಾಗ, ಬಿಲ್ಲ, ಸೋಮ, ಮೀನಗ ಸಿಂಹ, ಬುಕ್ಕಿ ನಾಯಕ, ಕಲ್ಲಿಕೋಟೆಯ ಚಿಕ್ಕ, ಮಾದಿಗರ ಹಂಪ ಮಡಿದ ವಿಚಾರ ತಿಳಿದು ರಣರಂಗದಲ್ಲಿ ಧುಮುಕಿದ ಮಾತಂಗಿ ಎದುರಾದಳು. ಪರಸ್ಪರ ಯುದ್ಧ ಕಾವೇರಿತು. ಮಾದಿಗಿತ್ತಿಯಪಡೆ ಮುಂದುವರೆಯಿತು. "ಸಂಗ್ರಾಮದಲ್ಲಿ ಕಾದಿ ಹೆಂಗಸ ಕೊಂದರೆ ಭಂಗ ತಪ್ಪದು ಸ್ವರ್ಗದೊಳಗೆ" ಎಂದು ಅವಳನ್ನು ಬಿಟ್ಟುಕೊಟ್ಟನು. ಅಷ್ಟರಲ್ಲಿ ತುರುಕರು ಏರಿ ಬಂದು ರಾಮನ ಮೇಲೆ ಬಾಣಗಳ ಸುರಿಮಳೆಗೆರೆದರು. ಆಗ ರಾಮನು ಕಾಟಣ್ಣನ್ನು ಕರೆದು ಅರಮನೆಗೆ ಹೋಗಿ ಮಡದಿಯರನ್ನು ಕೊಂದು ಬರಲು ತಿಳಿಸಿದ ಆಣೆ ಮಾಡಿ ಅರಮನೆಗೆ ಹೋದ

ಕಾಟಣ್ಣ ನಿಜಸ್ಥಿತಿಯನ್ನು ತಿಳಿಸಿದ ಆಗ ಎಲ್ಲರೂ ಗೋಳಿಟ್ಟರು, ನಾರಿಯರೆಲ್ಲ ಮಳಲು ಗೌರಿಯನ್ನು ಮಾಡಿ ಪೂಜಿಸಿದರು.

ಓಡಿ ಬಂದು ಕೊಂಡ ಸುತ್ತಿ, ಕಟ್ಟೆ ಹತ್ತಿ ರಾಮನನ್ನು ಹಾಡುತ್ತ-ಹೊಗಳುತ್ತಾ ಬೆಂಕಿಯಲ್ಲಿ ಬಿದ್ದರು. ಮೈತುಂಬ ಬಾಣ ನೆಟ್ಟಿದವು ರಾಮನು ಪ್ರಾಣ ಬಿಟ್ಟನು. ಅಪ್ಸರೆಯರು ರಾಮನಲ್ಲಿಗೆ ಬಂದರು.ಮರುಜೀವ ಬಂದು ರಾಮ ಎದ್ದು ಬರಲು ದೇವತೆಗಳು ಹಿಂದೆ ಸರಿದರು."ಪರನಾರಿ ಸೋದರ" ಎಂಬ ಬಿರುದು ರಾಮನಿಗೆ ಸಾರ್ಥಕವಾಯಿತು, ಎದ್ದ ಶವವನ್ನು ನೋಡಿ ಮಾದಿಗಿತ್ತಿಯ ಸೈನ್ಯ ಓಡಿಹೋಯಿತು. ಅಷ್ಟರಲ್ಲಿ ಕಾಗೆಯೊಂದು ರಾಮನ ಶರೀರದ ಮೇಲೆ ಕುಳಿತು ಕೊಂಡಿತು. ರಾಮ ಸತ್ತನೆಂದು ಖಚಿತ ಮಾಡಿಕೊಂಡ ವೈರಿಗಳು ಅವನ ತಲೆ ಕತ್ತರಿಸಿದರು ರಾಮನ ಸಾಹಸ ಶೌರ್ಯ ಮೆಚ್ಚಿ ಬಾಯಲ್ಲಿ ಮುತ್ತು ಮಾಣಿಕ್ಯ ರತ್ನ ತುಂಬಿ ತಲೆಯನ್ನು ಗಂಧ ಪುಷ್ಪಗಳಿಂದ ಅಲಂಕರಿಸಿದರು.

ರಾಹುತನೊಂದಿಗೆ ರುಂಡವನ್ನು ಡಿಲ್ಲಿಗೆ ಕಳಿಸಿದರು ಸುರಿತಾಳ ರುಂಡ ನೋಡಿ ಮರುಗಿದನು ಅವನ ಮಗಳು ಲಗ್ನವಾಗಲು ಬಯಸಿದ್ದ ಹುಸೇನಿ ದುಃಖಿಸಿ ಇವನನ್ನು ಬಿಡಾಲಾರೆ ಎನ್ನುತ್ತಾ ತಲೆಯ ಮುತ್ತಿನ ರುಂಡವನ್ನು ತುರುಬಿಗೆ ಮುಡಿದುಕೊಂಡಳು. ತಲೆಯನ್ನು ತೊಡೆಯ ಮೇಲೆ ಇಟ್ಟುಕೊಂಡು ಅಳುತ್ತಾ ಹುಡಿಯಲ್ಲಿ ರುಂಡ ತುಂಬಿಕೊಂಡು ಕಿಚ್ಚಿಗೆ ಬೀಳುವೆನೆಂದು ತಂದೆಗೆ ಬೇಡಿಕೊಂಡಳು. ತಂದೆ ಸಮಾದಾನ ಪಡಿಸಿದ. ಮಲ್ಲಿಗೆ, ಸಂಪಿಗೆ, ಕೇದಗೆಗಳಿಂದ ಅಲಂಕರಿಸಿ ರುಂಡವನ್ನು ಕೊಟ್ಟಳು. ಅದನ್ನು ಸುರ ಹೂನ್ನಿಮರಕ್ಕೆ ಕಟ್ಟಲಾಯಿತು, ಮಧ್ಯರಾತ್ರಿ ಅದ್ಬುತಗಳು ಉದ್ಭವಿಸಿ, ದಿಲ್ಲಿಯ ಜನ ಕಂಗೆಟ್ಟರು ಪಟ್ಟಣ ನಡುಗುವಂತೆ ಸದ್ದು ಮಾಡಿತು. ಜನ ಭಯ ಭೀತಗೊಂಡು ರುಂಡವನ್ನು ಕಮ್ಮಟಕ್ಕೆ ಹಿಂದಿರುಗಿಸಲು ಅಪ್ಪಣೆ ಮಾಡಲಾಯಿತು. ಆದರೆ ರುಂಡ ನೆಲ ಬಿಟ್ಟು ಏಳಲಿಲ್ಲ, ಆನೆ ಕಟ್ಟಿ ಎಳೆಸಿದರು ಸಾಧ್ಯವಾಗಲಿಲ್ಲ, ಸುರಿತಾಳನ ಭಟ್ಟ ಕಮ್ಮಟಕ್ಕೆ ಬಂದು ನಿಜಸ್ಥಿತಿ ವಿವರಿಸಿದ ಭಟ್ಟ ರೂಪಿದೇವಯ್ಯ ದಿಲ್ಲಿಗೆ ಹೋಗಿ ಸುರಿತಾಳನಿಂದ ಗೌರವ ಪಡೆದನು. ರೂಪಿದೇವಯ್ಯನ ಕನಸಿನಲ್ಲಿ ರಾಮಯ್ಯ ಬಂದು, "ಡಿಳ್ಳಿಯ ಗಂಡ ಡಿಳ್ಳಿ ರಾಯರಗಂಡ" ಎಂದು ಹೊಗಳಿದರೆ ಮಾತ್ರ ಬರುವನೆಂದು ಹೇಳಿದ. ಬೆಳಗಾಗುತ್ತಲೆ ರೂಪಿದೇವಯ್ಯ ಸುರಿತಾಳನಲ್ಲಿಗೆ ಬಂದು ಸ್ವಪ್ನ ವಿಶೇಷ ಹೇಳಿದ, ಸುರಿತಾಳನೂ ರೂಪಿದೇವಯ್ಯನೂಂದಿಗೆ ರುಂಡವಿದ್ದಲ್ಲಿಗೆ ಬಂದನು ರುಂಡವನ್ನು ಹೊಗಳಿದಾಗ ರುಂಡ ಕೈಗೆ ಬಂದಿತು. ರೂಪಿದೇವಯ್ಯ ತೆಗೆದುಕೊಂಡು ಪ್ರಯಾಣಬೆಳೆಸಿದ. ರೂಪಿದೇವಯ್ಯ ಮಧ್ಯದಲ್ಲಿ ರುಂಡವನ್ನಿಟ್ಟು ಮೂತ್ರ ವಿಸರ್ಜನೆಗೆ ಹೋಗಿ

ಬರುವಷ್ಟರಲ್ಲಿ ಅದು ಮರ ಏರಿದ್ದಿತು, ರೂಪಿದೇವಯ್ಯ ಮರ ಹತ್ತಿ ಶಾಪ ಹಾಕಿದ. ಆಗ ಪ್ರಾಣ ಅಳಿದ ರುಂಡದೊಂದಿಗೆ ಅವನು ಕಮ್ಮಟಕ್ಕೆ ಬಂದ. ಕಂಪಿಲರಾಯ, ಹರಿಯಾಲದೇವಿ ರುಂಡನೋಡಿ ಪರಿಪರಿಯಾಗಿ ಹಲುಬಿದರು. ಪ್ರಜೆ ಪರಿವಾರ ದುಃಖಗೊಂಡರು, ಕಂಪಿಲರಾಯ ರುಂಡವನ್ನು ವಿಶ್ವನಾಥನ ಪಾದಕ್ಕೆ ಅರ್ಪಿಸಲು ಕಾಶಿಗೆ ಕಳುಹಿಸಿದರು.

ಈತನ ಹೆಸರು ರಾಮ, ಕುಮಾರ ಎನ್ನುವುದು ವಿಶೇಷಣ. ಇದು ಷಣ್ಮುಖನ ಹೆಸರು ಬ್ರಹ್ಮಚಾರಿಯಾಗಿರುವ ಷಣ್ಮುಖ ಶುಚಿಯೂ ಹೌದು ಹೀಗಾಗಿ 'ಕುಮಾರ' ವಿಶೇಷಣವನ್ನು ರಾಮನಿಗೆ ಅಂಟಿಸಲಾಗಿದೆ.ಕರ್ನಾಟಕದಲ್ಲಿ ಈ ಪರಂಪರೆಗೆ ಕುಮಾರ ರಾಮನೆ ಮೊದಲಿಗನಾದ.ಇದರ ಮುಂದುವರಿಕೆ ಎಂಬಂತೆ ಸಿರುಮನ ಸಾಂಗತ್ಯದಲ್ಲಿ ಕುಮಾರ ಮಲ್ಲ, ಎಂಬ ಹೆಸರುಗಳು ಕಾಣಿಸಿಕೊಳ್ಳುವುದನ್ನು ಗಮನಿಸಿಕೊಳ್ಳಬಹುದು.

## "ನಂಜುಂಡ ಕವಿ ಬರೆದಿರುವ "ಕುಮಾರ ರಾಮ ಸಾಂಗತ್ಯ"

ಕನ್ನಡ ಸಾಹಿತ್ಯದಲ್ಲಿ ಬೆಳೆದು ಬಂದಿರುವ ಕಾವ್ಯ, ಕಾದಂಬರಿ, ನಾಟಕ ಮುಂತಾದವುಗಳಲ್ಲಿ ನಾನಾ ರೀತಿಯ ಕಥಾವಸ್ತುಗಳು ಬಂದಿವೆ. ಕನ್ನಡ ಸಾಹಿತ್ಯದ ಸಣ್ಣ ಕಥೆಗಳ ಉಗ್ರಾಣವೆನಿಸಿರುವ "ವಡ್ಡಾರಾಧನೆ" ಯಲ್ಲಿ ಬರುವ "ಕಾರ್ತಿಕ" ಋಷಿಯ ಕಥೆಯಲ್ಲಿ ರಾಜನು ತನ್ನ ಕಿರಿಯ ಮಗಳ ಸೌಂದರ್ಯಕ್ಕೆ ಮಾರು ಹೋಗಿ, ಮಗಳನ್ನೆ ಮದುವೆಯಾಗಿ ಮಗನನ್ನು ಪಡೆದ ಮಗ ತಾಯಿಯನ್ನು ಕುರಿತು ನನಗೆ ತಾತನಿಲ್ಲವೆ ಎಂದು ಪ್ರಶ್ನಿಸಿದಾಗ ತಾಯಿ ಅತಿ ದುಃಖದಿಂದ ನಿನಗೆ ಯಾರು ತಂದೆಯೋ ಅವರೆ ನಿನಗೆ ತಾತ ಎಂದು ಹೇಳಿದಾಗ ಮಗ ವೈರಾಗ್ಯ ಪರನಾಗುವ ಕಥೆ.

ಕವಿ ಚಕ್ರವರ್ತಿ ಜನ್ನನ "ಯಶೋಧರ ಚರಿತೆ" ಮತ್ತು "ಅನಂತನಾಥ ಪುರಾಣ" ಗಳಲ್ಲಿ ಬರುವ ರಾಣಿ ಸಂಗೀತದಿಂದಲೇ ಮಾತ್ರ ತನ್ನಿನಿಯನಿಗೆ ಒಲಿದದ್ದು, ಸೇಹಿತನು ಪರಮ ಸ್ನೇಹದಿಂದ ಸ್ನೇಹಿತನ ಹೆಂಡತಿಯನ್ನು ಬಯಸಿ ದುರಂತ ಮಾಡಿಸಿದ್ದು ಇಂಥ ವಿಷಯಗಳು ಸಮಾಜದಲ್ಲಿ ವಿರುದ್ದವಾದವು. ಸಮಾಜದಲ್ಲಿರುವ ಮೌಲ್ಯಗಳನ್ನು ಧಿಕ್ಕರಿಸಿ ತನ್ನ ಮನಸಿನ ಆಸೆಗಳನ್ನು ಈಡೇರಿಸಿಕೊಳ್ಳಲು ಇಂಥ ವಿಕೃತ ಕೆಲಸಗಳು ನಡೆದಿವೆ.

ಪ್ರಸ್ತುತ ಕುಮಾರ ರಾಮನ ಸಾಂಗತ್ಯ ಕೃತಿಯಲ್ಲಿ ಬರುವ ಸಮಾಜ ಪುರಸ್ಕರಿಸದ ಧರ್ಮ ವಿರುದ್ಧವಾದ ಕಥೆ ಬರುತ್ತದೆ. ತಾಯಿಯಾದವಳು(ಚಿಕ್ಕಮ್ಮ) ಮಗನ ಮೇಲೆ ಮೋಹ ಪಡವುದು, ಮಗನು ನೊಂದಿರಲು, ಗಂಡನ ಹತ್ತಿರ ಚಾಡಿ ಹೇಳಿ ಮಗನನ್ನು ಕೊಲ್ಲಿಸುವಂತೆ ಮಾಡುವ ಹೃದಯ ವಿದ್ರಾವಕ ಕಥೆ ಈ ಗ್ರಂಥದಲ್ಲಿ ಬಂದಿದೆ.

"ಕುಮಾರರಾಮಚರಿತ, ಕುಮಾರ ರಾಮ ಸಾಂಗತ್ಯ" ಎಂಬ ಹೆಸರುಗಳೂ ಉಂಟು 1956 ರಲ್ಲಿ ಮೈಸೂರಿನ ಪ್ರಾಚ್ಯ ವಿದ್ಯಾಲಯದವರು ಪೂರ್ವಾರ್ಧವನ್ನು ಪ್ರಕಟಿಸಿದ್ದಾರೆ. ಮುಂದಿನ ಉತ್ತರ ಭಾಗವೂ ಬಂದಿದೆ ಇದನ್ನು ಸಾಂಗತ್ಯದಲ್ಲಿ ರಚಿಸಿದೆ. 12 ಆಶ್ವಾಸಗಳಲ್ಲಿ 47 ಸಂಧಿಗಳು 5807 ಪದ್ಯಗಳು ಇವೆ. ಸುಮಾರು ಆರು ಸಾವಿರ ಪದಗಳನ್ನೊಳಗೊಂಡಿವೆ ಈ ಕೃತಿಯ ಸಂಕ್ಷಿಪ್ತ ಸಾರಾಂಶ ಹೀಗಿದೆ.

ಕರ್ನಾಟಕದ ಹಂಪೆಯ ಕ್ಷೇತ್ರಕ್ಕೆ ದಕ್ಷಿಣದಲ್ಲಿದ್ದ ಹೊಸಮಲೆ ದುರ್ಗಕ್ಕೆ ಕಂಪಿಲ ಮತ್ತು ಅವನ ಪಟ್ಟದ ರಾಣಿ ಹರಿಯಾಲದ ದೇವಿ ಮಂತ್ರಿ ಬೈಚಪ್ಪ, ರತ್ನಾಜಿ ಎಂಬ ಬೇರೊಬ್ಬ ರಾಜಕುಮಾರಿಯನ್ನು ಕಂಪಿಲನು ಮದುವೆಯಾದನು. ಅವಳು ಅವನ ಮನಸ್ಸನ್ನು ಸೂರೆಗೊಂಡಳು ಹರಿಯಾಲದೇವಿಗೆ ಜಟ್ಟಿಂಗೇಶ್ವರನ ವರ ಪ್ರಸಾದದಿಂದ ಒಬ್ಬ ಮಗ ಹುಟ್ಟಿದನು ಅವನಿಗೆ "ಕುಮಾರ ರಾಮ ಎಂಬ ಹೆಸರನ್ನಿಟ್ಟರು, ಅವನು ಬೆಳೆದು ವಿದ್ಯಯನ್ನು ಕಲಿತು ಶಾಸ್ತ್ರಗಳಲ್ಲಿ ನಿಪುಣನಾಗಿ ಹದಿನೆಂಟು ವರುಷದ ಹರೆಯದವನಾಗುತ್ತಾನೆ, ವೀರತೆ ಅವನ ಹುಟ್ಟುಗುಣ, ಆಗಿನ ಕಾಲದಲ್ಲಿ ಎಂದರೆ ವಿಜಯನಗರ ಸ್ಥಾಪನೆಗಿಂತ ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಪ್ರಬಲರಾಗಿದ್ದ ರಾಜರು, ಬಲ್ಲಾಳರು, ಓರಂಗಲ್ಲಿನ ಕಾಕತೀಯ ರುದ್ರ ಕರಿಪತಿ, ಕಂಪಿಲೇಶ್ವರ, ಡಿಲ್ಲಿಯ ಸುಲ್ತಾನನಾದ ಅಲ್ಲಾವುದ್ದೀನ ಮುಂತಾದವರು ಕುಮಾರನೊಂದಿಗೆ ಯುದ್ಧಮಾಡಲಾಯಿತು ಕುಮಾರರಾಮ ತನ್ನ ಪ್ರತಾಪವನ್ನು ಮೆರೆದನು; ಕಾಕತೀಯ ವೀರ ರುದ್ರನನ್ನು ಸೋಲಿಸಿದನು, ಇಬ್ಬರೊಡನೆ ಸಂಧಿಯ ಮಾತನ್ನು ಬೆಳೆಸಿ ಎಲ್ಲರೂ ಒಂದಾಗಿ ತುರುಕರ ದಾಳಿಯನ್ನು ತಡೆಗಟ್ಟುವ ಏರ್ಪಾಡಿನಲ್ಲಿದ್ದರು.

ದೆಲ್ಲಿಯ ಸುಲ್ತಾನನ ಮಗಳಿಗೆ ಕುಮಾರ ರಾಮನ ಶೌರ್ಯ ಸಾಹಸಗಳು ತಿಳಿದು ಅವಳಿಗೆ ಕುಮಾರ ರಾಮನ ಮೇಲೆ ಮನಸ್ಸಾಗುತ್ತದೆ. ಅವಳು ಅವನ ನೆನಪಲ್ಲೆ ಇರುವುದನ್ನು ಕಂಡು ಸುಲ್ತಾನ ರಾಮನಾಥನ ಚಿತ್ರಪಟವನ್ನು ತರಿಸಿ ಕೊಟ್ಟನು. ದೆಹಲಿ

ಸುಲ್ತಾನನು ರಾಮನಾಥನು ತನ್ನ ಮಗಳಿಗೆ ತಕ್ಕ ವರವೆಂದು ಯೋಚಿಸಿ, ತನ್ನ ಮಗಳನ್ನು ರಾಮನಾಥ ಮದುವೆಯಾದರೆ ಪ್ರೀತಿಯಿಂದ ಕಂಡು ಬಿದರೆ, ಸಗರ, ನಿಂಬಾಪುರ, ರಾಯಚೂರು ನಾಡುಗಳನ್ನು ಬಳುವಳಿಯಾಗಿ ಕೊಡುತ್ತೇನೆಂದು ಕಂಪಿಲರಾಯನಿಗೆ ಹೇಳಿಕಳುಹಿಸಿದನು.

ಕಂಪಿಲನು ಇದಕ್ಕೆ ಒಪ್ಪಲಿಲ್ಲ, ಆದ್ದರಿಂದ ದೆಹಲಿ ಸುಲ್ತಾನನು ದಂಡೆತ್ತಿ ಬರಲು ಕಾರಣವಾಯಿತು. ಅವನ ಉದ್ದೇಶ ರಾಮನಾಥನನ್ನು ಸೆರೆಹಿಡಿದು ತಂದು ತನ್ನ ಮಗಳಿಗೆ ಮದುವೆ ಮಾಡಬೇಕೆಂದು.

ಎರಡನೆಯದಾಗಿ ಮುಂಗಲಿ ದೇಶದ ರಾಜನು ಸುಲ್ತಾನನಿಗೆ ಕಪ್ಪವನ್ನು ಕಳುಹಿಸುವಾಗ ಅದರೊಡನೆ ಸಿಂಗಾಡಿಯೆಂಬ ಬಿಲ್ಲನ್ನು ಕಳಿಸಿ "ಇದನ್ನು ಏರಿಸಿ ಏಳು ಕೊಪ್ಪರಿಗೆಗಳನ್ನು ಭೇದಿಸಿಕೊಂಡು ಹೋಗುವ ಹಾಗೆ ಬಾಣ ಬಿಡುವ ಕಲಿಗಳು ನಿನ್ನ ರಾಜ್ಯದಲ್ಲಿದ್ದಾರೆಯೆ" ಎಂದು ಹುರುಪಿನ ಮಾತನ್ನು ಅಡಿದನು, ಈ ಸಾಹಸವನ್ನು ಮಾಡಲು ಅಲ್ಲಾವುದ್ದೀನನ ಕಡೆಯ ಯಾವ ವಜೀರನು ಮಲ್ಲಿಕನೂ, ಖಾನನೂ ಸಮರ್ಥನಾಗಲಿಲ್ಲ ಕೊನೆಗೆ ಬಾದುರಖಾನ ಎಂಬಾತನು ಈ ಸಾಹಸದ ಕೆಲಸವನ್ನು ಮಾಡಿ ದೊರೆಯಿಂದ ಜಹಗೀರುಗಳನ್ನು ಪಡೆದನು. ಇತರ ವಜೀರರಿಗೆ ಅಸೂಯೆ ಉಂಟಾಯಿತು. ಇವನನ್ನು ಕೊಲ್ಲಲು ಯತ್ನಿಸಿದರು "ತನಗಿಂತ ಶೂರನಾದ ಮನುಷ್ಯ ತನ್ನ ರಾಜ್ಯದಲ್ಲಿರುವದನ್ನು ದೊರೆ ಸಹಿಸುವುದಿಲ್ಲ" ಎಂಬ ಮಾತಿನಿಂದ ಇವನನ್ನು ಹೆದರಿಸಿದರು. ಬಾದುರಖಾನ ಪಲಾಯನ ಮಾಡಿ ಕರ್ನಾಟಕಕ್ಕೆ ಬಂದು ಕಂಪಿಲನಿಗೆ ಶರಣಾದನು ಇಲ್ಲಿಯವರಿಗೆ ನಂಜುಂಡ ಕವಿಯು ರಾಮನಾಥನನ್ನು ಹೊಗಳಿ ಅವನ ಶೌರ್ಯ ಸಾಹಸಗಳನ್ನು ಹೊಗಳಿ ವಿಜೃಂಬಿಸಿದ್ದಾನೆ.

ರತ್ನಾಜಿಯ ಮೋಹದ ಕಥೆ ಬರುತ್ತದೆ, ಹೊಸಮಲೆ ದುರ್ಗದಲ್ಲಿ ಒಂದು ದಿನ ಶೂಲದ ಹಬ್ಬ ಆಚರಣೆ ಮಾಡುತ್ತಿರುವಾಗ ಅನೇಕ ಅರಸು ಮಕ್ಕಳು ಬಂದು ಬೀದಿಯಲ್ಲಿ ನೆರೆದಿದ್ದಾರೆ. ರತ್ನಾಜಿ ತನ್ನ ಉಪ್ಪರಿಗೆಯನ್ನು ಹತ್ತಿ ತನ್ನ ಸಖಿ ಸಂಗಾಯಿ ಹೇಳಿದ ಅರಸು ಮಕ್ಕಳ ವರ್ಣನೆ ಯನ್ನು ಕೇಳಿ ಕೊನೆಗೆ ಕುಮಾರ ರಾಮನನ್ನು ಕಂಡು ಮನ ಸೋಲುತ್ತಾಳೆ. ಹೇಗಾದರು ಮಾಡಿ ರಾಮನಾಥನನ್ನು ಒಲಿಸಿಕೊಳ್ಳಬೇಕೆಂದು ಮನಸ್ಸುಮಾಡುತ್ತಾಳೆ.

ತನ್ನ ಜೊತೆಗಿದ್ದ ಸಖಿ ಸಂಗಾಯಿ ಈ ರೀತಿ ಮಗನ ಮೇಲೆ ಮೋಹಗೊಳ್ಳುವುದು ತರವಲ್ಲವೆಂದು ಹೇಳದೆ ಅವಳಿಗೆ ಪ್ರೋತ್ಸಾಹ ಕೊಟ್ಟು ರಾಮನಾಥನ ಸಂಗವನ್ನು ದೊರೆಕಿಸಿ ಕೊಡುತ್ತೇನೆಂದು ಮಾತು ಕೊಡುತ್ತಾಳೆ. ರತ್ನಾಜಿಯು ದಿನೇ ದಿನೇ ವಿರಹ ಹೆಚ್ಚಾಗಿ ಕಂಗೆಟ್ಟಳು.

ಕಂಪಿಲರಾಯನು ಒಂದು ದಿನ ಬೇಟೆಯಾಡಲು ಹೊರಟು ತನ್ನ ಮಗನನ್ನು ಕರೆದನು. ಆದರೆ ಅವನು ಕುಟಿಲ ದೇವತೆಗಳ ಮಾಟದಿಂದ ಅಂದು ಅವನು ಬೇಟೆಗೆ ಹೋಗದೆ ನೀರಾಟವಾಡಲು ಆಸೆಯಾಗುತ್ತದೆ, ತನ್ನ ಗೆಳೆಯರೊಂದಿಗೆ ತುಂಗಭದ್ರೆಗೆ ಹೋಗಿ ಒಬ್ಬರಿಗೊಬ್ಬರು ನೀರು ಎರಚಿಕೊಂಡು ಸಂತೋಷ ಪಟ್ಟು ಸಾಯಂಕಾಲ ಮನೆಗೆ ಬಂದನು. ಅಂದು ರಾತ್ರಿ ಅಪಶಕುನದ ಕನಸು ಬೀಳಲು ಬೇಸರಗೊಂಡನು.

ಮರುದಿನ ಚೆಂಡಾಟವಾಡಬೇಕೆಂದು ಆಸೆಯಾಯಿತು.ಗೆಳೆಯರೊಂದಿಗೆ ಕೂಡಿ ತಾಯಿ ಹತ್ತಿರ ಹೋಗಿ ಚಂಡಾಟವಾಡಬೇಕೆಂದು ಹೋಗಿ ಮುತ್ತಿನ ಚಂಡನ್ನು ಕೊಡಬೇಕೆಂದು ಕೇಳಿದನು. "ಚೆಂಡಾಟವೇಕೆ ಹದಿನೆಂಟು ವರ್ಷದ ಹುಡುಗನಿಗೆ ಮಕ್ಕಳಾಟಿಕೆಯ ಚೆಂಡು ಒಳ್ಳೆಯದಲ್ಲವೆಂದು ಬುದ್ಧಿವಾದ ಹೇಳಿದಳು, ರಾಮನು ತನ್ನ ಗೆಳೆಯರ ಚೆಂಡಾಟವಾಡಲು ಕಾದಿರುವರು ಕೊಡದೆ ಇದ್ದರೆ ಬೇಸರಗೊಳ್ಳುವರೆಂದು ಹೇಳಿ ಕೊನೆಗೆ ತಾಯಿಯನ್ನು ಒಪ್ಪಿಸಿ ಚೆಂಡಾಟವಾಡಲು ಹೊರಟನು.

ಆಟದ ಬಯಲು ರತ್ನಾಜಿಯ ಅರಮನೆಗೆ ಹತ್ತಿರವಾಗಿತ್ತು, ರಾಮನು ಚೆಂಡನ್ನು ಮೇಲಕ್ಕೆ ಎಸೆದನು, ಅದು ಕೆಳಕ್ಕೆ ಬರಲೆ ಇಲ್ಲ. ಕುಟಿಲ ದೇವತೆಗಳು ಅದನ್ನು ಅಲ್ಲಿಯೇ ಹಿಡಿದು ರತ್ನಾಜಿಯ ಪಾದಗಳ ಮೇಲೆ ಉರುಳಿಸಿದರು. ಅದನ್ನು ಕಂಡು ಅವಳಿಗೆ ರಾಮನಾಥನೆ ಬಂದಂತಾಯಿತು.

ರಾಮನಾಥನು ಚೆಂಡನ್ನು ತರುವುದಕ್ಕಾಗಿ ಕಾಟಣ್ಣನನ್ನು ಕಳುಹಿಸುತ್ತಾನೆ, ಕಾಟಣ್ಣ ಹೋಗಿ ಕೇಳಲು ಯಾವ ಚೆಂಡು ಇಲ್ಲಿ ಬರಲಿಲ್ಲವಲ್ಲ ಎಂದು ಹೇಳಿ ಚೆಂಡು ಬೇಕಾದರೆ ಅವನೆ ಬರಲಿ ಎಂದು ಹೇಳುತ್ತಾಳೆ.

ಕಾಟಣ್ಣನು ರಾಮನಾಥನಿಗೆ ನೀನೆ ಹೋಗಬೇಕು ಎಂದು ಹೇಳಿದಾಗ ರಾಮನಾಥನು ಹೋಗುತ್ತಾನೆ. ರಾಮನಾಥನನ್ನು ಒಳಗೆ ಕರೆದು ಹೂವು-ಗಂಧಗಳನ್ನು ಮುಂದಿಟ್ಟು ವಸ್ತ್ರ ಒಡವೆಗಳನ್ನು ತೋರಿಸಿ ಶೃಂಗಾರ ಚೇಷ್ಟೆಯಿಂದ ಲಲ್ಲೆಗೆ ಮೊದಲಿಟ್ಟಳು. ರಾಮನಾಥ_ಇಷ್ಟು ಪ್ರೀತಿ ಇವಳಿಗೆ ನನ್ನಲ್ಲಿ ಇರಬೇಕಾದರೆ ಇವಳು ನಿಜವಾಗಿ ನನ್ನ ಹೆತ್ತ ತಾಯಿ ಇರಬೇಕು ಎಂದು ಭಾವಿಸಿಕೊಳ್ಳುವನು.ರತ್ನಾಜಿಯ ಕಾಮುಕ ಪ್ರೀತಿಯ ಸುಳಿವು ಅವನಿಗೆ ತಿಳಿಯಲಿಲ್ಲ, ಕೊನೆಗೆ ಅವಳು ತಾನೆ ಮೇಲೆ ಬಿದ್ದು ತನ್ನ ಪ್ರೇಮ ವ್ಯಕ್ತಪಡಿಸಿದಳು. ಆಗ ರಾಮನಾಥ ಶಿವಶಿವ ಎಂದು ಕಿವಿಮುಚ್ಚಿ ಎದ್ದು ಹೋಗಲು ಸಿದ್ಧನಾದಾಗ ರತ್ನಾಜಿಯೂ ಅವಳ ಗೆಳತಿಯರು ಅವನ ಮುಂದಲೆ ಹಿಡಿದು ಹಿಂಸಿಸುವರು, ಕಡೆಗೆ ರಾಮನು ಕೊಸರಿಕೊಂಡು ಹೊರಕ್ಕೆ ಬರುವನು. ರತ್ನಾಜಿಗೆ ತುಂಬ ಕೋಪ ಬಂತು. ಕಂಪಿಲನಿಗೆ ಚಾಡಿ ಹೇಳಿ ರಾಮನನ್ನು ಕೊಲ್ಲಿಸುವ ಸಂಕಲ್ಪ ಮಾಡಿದಳು. ಇದಕ್ಕಾಗಿ ಆಭರಣಗಳನ್ನು ಬಿಸುಟು ತಲೆಗೆದರಿ, ಕೊಳಕುಬಟ್ಟೆಯನುಟ್ಟು ಮೈಯಲೆಲ್ಲಾ ನಖಕ್ಷತ ದಂತಕ್ಷತಗಳನ್ನು ಮಾಡಿಕೊಂಡು, ಬೇಟೆಯಾಡಿ ದಣಿದು ಬಂದ ಕಂಪಿಲರಾಯನಿಗೆ ನಡೆದ ವಿಷಯ ಹೇಳಿದಳು. ರಾಜನು ನಿಜವೇ ಇರಬೇಕೆಂದು ನಂಬಿ ತನ್ನ ಮಗನ್ನು ಮತ್ತು ಅವನ ಗೆಳೆಯರನ್ನು ಕೊಂದು ತಲೆಯನ್ನು ಮುಂದಿಡಬೇಕೆಂದು ಮಂತ್ರಿಯಾದ ಬೈಚಪ್ಪನಿಗೆ ಸೂಚಿಸಿದನು. ಬೈಚಪ್ಪ ಕುಮಾರರಾಮನನ್ನು ಕೊಲ್ಲದೇ ನೆಲಮಾಳಿಗೆಯಲ್ಲಿರಿಸಿ ಇಂದ್ರಜಾಲದಿಂದ ತಲೆಗಳನ್ನು ತಂದು ತೋರಿಸಲು ಅದನ್ನು ಕಂಡು ರತ್ನಾಜಿ ಸಂತೋಷಗೊಂಡಳು.

ರಾಮನಾಥನು ಸತ್ತನೆಂಬ ಸುದ್ದಿ ಅಲ್ಲಾವುದೀನನಿಗೆ ತಿಳಿದು ಕರ್ನಾಟಕ ರಾಜ್ಯವನ್ನು ಕೊಳ್ಳೆ ಹೊಡೆದು ಗೆಲ್ಲುವ ಕಾಲ ಬಂತೆಂದು ಭಾವಿಸಿ ಮಲ್ಲಿಕನ ನಾಯಕತ್ವದಲ್ಲಿ ದಂಡನ್ನು ಕಳುಹಿಸಿದನು. ಅದನ್ನು ಎದುರಿಸಿ ಸೋಲಿಸಿ ಓಡಿಸಲು ಸಮರ್ಥನಾಗಿದ್ದವನು ರಾಮನಾಥನೊಬ್ಬನೇ, ಅವನು ಈಗ ಇದ್ದಿದ್ದರೆ ಚೆನ್ನಾಗಿತ್ತು ಎಂದು ಕಂಪಿಲನು ವ್ಯಸನ ಪಡುವನು. ಆಗ ಮಂತ್ರಿ ಭೈಚಪ್ಪ "ದುಃಖವೇಕೆ ರಾಮನಾಥನಂತ ಯೋಧರು ನಮ್ಮ ನಾಡಿನಲ್ಲಿ ಹಲವರಿದ್ದಾರೆ.ಈಗ ತಾನೆ ಒಬ್ಬ ಹೊಸ ವೀರ ನಮ್ಮ ನಾಡಿಗೆ ಬಂದಿದ್ದಾನೆ. ಅವನನ್ನು ಕರೆಯಿಸಿ ಯುದ್ಧಕ್ಕೆ ಬಿಟ್ಟರೆ ಜಯ ಶತ ಸಿದ್ಧ" ಎಂದು ಹೇಳಿ ರಾಮನಾಥನನ್ನೂ ಗೆಳೆಯರನ್ನು ನೆಲಮಾಳಿಗೆಯಿಂದ ಹೊರಕ್ಕೆ ಬಿಟ್ಟು ಕಾಳಗವಾಡಿಸುತ್ತಾನೆ. ಕಂಪಿಲರಾಯನಿಗೆ ಜಯವಾಗುತ್ತದೆ.ಆ ಹೊಸ ವೀರನನ್ನು ನೋಡಬೇಕೆಂದು ಕಂಪಿಲರಾಯನಿಗೆ ಆಸೆಯಾಗುತ್ತದೆ. ಕೆಲವು ದಿನ ಕಳೆಯಲಿ ಎಂದು ಭೈಚಪ್ಪ ಸಮಾಧಾನ ಪಡಿಸುವನು.

ಸೋತ ಮಲ್ಲಿಕನು ಡಿಲ್ಲಿಗೆ ಹೋಗಿ ಸುಲ್ತಾನನ ಕೋಪಕ್ಕೆ ಪಾತ್ರನಾದನು. ಆಗ ಅಲ್ಲಿದ್ದ ಮಾತಂಗಿಯೊಬ್ಬಳು "ನನಗೆ ವೀಳ್ಯವನ್ನು ಕೊಡು ರಾಮನಾಥನನ್ನು ಸೆರೆಹಿಡಿದು ತರುವೆ" ಎಂದು ಪ್ರತಿಜ್ಞೆ ಮಾಡುವಳು. ಸರಿ ತಿರುಗಿ ದಂಡು ಹೊರಟು ಕಮ್ಮಟವನ್ನು ಮುತ್ತಿತು. ರಾಮನು ದುರ್ಗದ ಹೊರಗೆ ಕಾಯುತ್ತಿದ್ದನು. ಕಾಟಣ್ಣ ಬಾದುರಖಾನರು ದುರ್ಗದ ಒಳಗೆ ರಕ್ಷಣೆಗಾಗಿ ಕಾಯುತ್ತಿದ್ದರು. ಅಂದಿನ ಕಾಳಗದಲ್ಲಿ ತುರುಕರ ಕೈ ಮೇಲಾಯಿತು. ದುರ್ಗವನ್ನು ಲಗ್ಗೆ ಹಾಕಿ ಭೇಧಿಸಿ ಅವರ ಸೈನ್ಯ ಒಳ ಹೊಕ್ಕಿತು. ರಾಮನಾಥನು ಕುದುರೆ ಹತ್ತಿ ದೌಡಾಯಿಸಿ ದುರ್ಗದ ಒಳಕ್ಕೆ ಬಂದನು. ಅಣ್ಣನನ್ನು ಕಂಡ ಅವನಿಗೆ ಸಂತೋಷ. ಕುದುರೆಯಿಂದಿಳಿದು ಅವನ ಬಳಿ ಹೋಗುವಷ್ಟರಲ್ಲಿ ಅದು ಮಿಂಚಿನಂತೆ ಹೊಳೆದು ಮಾಯವಾಯಿತು. ಮಾತಂಗಿಯ ಸೈನ್ಯ ಗುಂಪು ಗುಂಪಾಗಿ ನಾನಾ ಕಡೆಗಳಿಂದ ಸುತ್ತುವರೆದು ಬಾಣಗಳನ್ನು ಸುರಿಸಿತು. ಕಾಟಣ್ಣ ಬಾದುರಖಾನರು ಕಣ್ಣ ಮುಂದೆ ಮಡಿದರು. ರಾಮನಾಥನಿಗೆ ತನ್ನ ಕೊನಗಾಲ ಬಂತೆಂದು ಅನ್ನಿಸಿತು. ಕೊಳ್ಳಿಯ ನಾಗ. ಕಾಳಾಂಜಿಯ ಕೆಂಪ ಮುಂತಾದ ಗೆಳೆಯರೆಲ್ಲಾ ಮಡಿದರು. ರಾಮನಾಥನಿಗೆ ತನ್ನ ಕೊನೆಗಾಲ ಬಂತೆಂದು ಅನ್ನಿಸಿತು. ರಾಮನು ಏಕಾಂಗಿಯಾಗಿ ಎದೆಗೆಡದೆ ನಿಂತು ಯುದ್ಧ ಮಾಡಿದನು, ಆದರೆ ಶತ್ರುಗಳ ಬಾಣಗಳು ಹರಿದು ಬಂದು ಅವನ ಕವಚವನ್ನು ಸೀಳಿ ಗಾಯಗೊಳಿಸಿ ರಕ್ತವನ್ನು ಸುರಿಸಿದವು. ಕೊನೆಗೆ ರಾಮನು ಶಕ್ತಿಗುಂದಿ ಬಂಡೆಯ ಮೇಲೆ ನಿಂತನು. ನಿಂತು ಶಿವ ಧ್ಯಾನದಿಂದ ಪ್ರಾಣ ಬಿಟ್ಟನು.

ಮಾತಂಗಿ ರಾಮನಾಥನ ತಲೆಯನ್ನು ಕತ್ತರಿಸಿ ತಟ್ಟೆಯಲ್ಲಿಟ್ಟು ಡೆಲ್ಲಿಗೆ ಕಳುಹಿಸಿದಳು. ದಿನ ದಿನಕ್ಕೂ ಅವನ ಕಾಂತಿ ಕಳೆಯೇರುತಿತ್ತು. ಸುಲ್ತಾನನ ಮಗಳು ಅದನ್ನು ಕಂಡು ತನ್ನ ಇನಿಯ ಮಡಿದ ಶೋಕದಿಂದ ಕುಗ್ಗಿ ಪ್ರಾಣ ಬಿಟ್ಟಳು. ಆ ತಲೆಯಿಂದ ಅನಿಷ್ಟವಾಗುತ್ತದೆ ಎಂದು ಸುಲ್ತಾನ ಅದನ್ನು ಮರಳಿ ಕಮ್ಮಟಕ್ಕೆ ಕಳುಹಿಸಿದನು. ಅಲ್ಲಿ ಇಟ್ಟ ಕೂಡಲೇ ಶಿವಲಿಂಗವಾಯಿತು.

ಇದು ನಂಜುಂಡ ಕವಿಯು ಬರೆದ “ಕುಮಾರರಾಮನ ಸಾಂಗತ್ಯ”ದ ಸಾರಾಂಶ ಈ ಕೃತಿಯ ರಚನೆಯಲ್ಲಿ ಕವಿಯ ಉದ್ದೇಶ ಕುಮಾರರಾಮನ ವೀರತ್ವವನ್ನು ಮತ್ತು ಅವನ ಪರನಾರಿ ಸೋದರತ್ವವನ್ನು ಸ್ಥಾಪಿಸಿದ್ದಾನೆ. ರತ್ನಾಜಿ ಒಡ್ಡಿದ ಸತ್ವ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ತೆರೆಮರೆಯಿಲ್ಲದ ಶೌಚ ಗುಣಕ್ಕೆ ಮನೆಮಾತಾಗುತ್ತಾನೆ. ಇದು ವಿಷಮವಾದ ಸಂದರ್ಭ ಆದರೆ ಜನರ ಬದುಕಿನಲ್ಲಿ ಅವರು ಬಡವರಿರಲಿ ಶ್ರೀಮಂತರಿರಲಿ ಕಾಲ ದೇಶಗಳ ಭೇದವಿಲ್ಲದೆ

ಸಾಧಾರಣವಾಗಿ ನಡೆಯುವ ಸಂದರ್ಭ ಇದರ ವಿವರಣೆ ಕವಿಯ ಲೋಕಾನುಭವವನ್ನು ವ್ಯಕ್ತಪಡಿಸಲಾಗಿದೆ.

ನಂಜುಂಡ ಕವಿಯು ಮನುಷ್ಯರ ನಡವಳಿಕೆಯಲ್ಲಿ ಅದೃಶ್ಯವಾದ ಶಕ್ತಿಯೊಂದರ ಕೈವಾಡ ಎಷ್ಟಿದೆ ಎಂಬುವುದನ್ನು ತೋರಿಸುವುದಕ್ಕಾಗಿಯು ಕಾವ್ಯದಲ್ಲಿ ಪುರಾಣದ ಛಾಯೆಯನ್ನು ತಂದಿದ್ದಾನೆ. ಕವಿ ಹಾಗೆಯೇ ಯೋಚಿಸಿ ಇಂಥದೇ ಒಂದು ವಿಷಯದ ಸಂದರ್ಭ ಮಹಾಭಾರತದಲ್ಲಿ ಅರ್ಜುನ-ಊರ್ವಶಿಯರ ಕಥೆಯಲ್ಲಿ ಇರುವುದನ್ನು ನೆನಪಿಗೆ ತಂದುಕೊಂಡು ಅರ್ಜುನ ಶಿವನ ಅಪ್ಪಣೆಯಂತೆ ಭೂಲೋಕದಲ್ಲಿ ರಾಮನಾಥನಾಗಿ ಹುಟ್ಟಿದನು. ಊರ್ವಶಿಯ ಆ ಅಂಶವೇ ರತ್ನಾಜಿ ಎಂಬ ಕಲ್ಪನೆಯನ್ನು ಕೊಟ್ಟಿದ್ದಾನೆ. ತುರುಕರೇ ರಾಕ್ಷಸರೆಂದು ಕವಿ ಹೋಲಿಸಿದ್ದಾನೆ. ಇಂದಿನ ಕಥೆಯನ್ನು ಅಂದಿನ ಪರಿಸರಕ್ಕೆ ಹೊಂದಿಸಿ ಹೇಳಲು ಸಹಾಯ ಮಾಡಿದ್ದಾನೆ.

ಕಡೆಯಲ್ಲಿ ರಾಮನ ತಲೆಯು ಶಿವಲಿಂಗವಾಯಿತೆಂದು ಪರಮೇಶ್ವರನು ಕುಮಾರರಾಮನಿಗೆ ಪ್ರಥಮ ಸ್ಥಾನವಿತ್ತನೆಂದು ಕಥೆಯನ್ನು ಪೂರ್ತಿಗೊಳಿಸುತ್ತಾನೆ. ಹೀಗೆ ಕವಿ ರಾಮನ ಕಥೆಯೊಡನೆ ಇತಿಹಾಸ ಪುರಾಣ ಮತ್ತು ದೇಶಭಕ್ತಿ ಪಾತಿವ್ರತ್ಯ ಶೌಚನಿಷ್ಠೆಗಳನ್ನು ಕೂಡಿಸಿ ತಂದಿದ್ದಾನೆ. ಇಲ್ಲಿ ಬರುವ ಸುಲ್ತಾನನು ಮಗಳು ರಾಮನಾಥನನ್ನು ಮೋಹಿಸಿದ ಕಥೆ, ಬಹಳ ಮೋಹಕವಾಗಿ ಬಂದಿದೆ. ಕನ್ನಡ ನಾಡಿನ ವೀರರ ಚರಿತ್ರೆಯನ್ನು ತಿಳಿಸುವ ಮೊಟ್ಟಮೊದಲ ಕಾವ್ಯ ಎಂದು ಹೇಳಬಹುದು ಎಂದಿದ್ದಾರೆ. ಹೀ.ಚಿ.ಶಾಂತವೀರಯ್ಯ ಹೀಗೆ ಕುಮಾರರಾಮನನ್ನು ಕುರಿತು 'ಲಿಖಿತ ಸಾಹಿತ್ಯ' ವಿಫುಲವಾಗಿ ರಚನೆಯಾಗಿದೆ. ಮಧ್ಯಕಾಲೀನ ಸಂದರ್ಭದಲ್ಲಿ ಕುಮಾರರಾಮನನ್ನು ಕುರಿತು ಪ್ರಾಸಂಗಿಕವಾಗಿ ಉಲ್ಲೇಖಿಸುವ ಕೃತಿಗಳನ್ನು ಈ ಹೇಳಿಕೆಯಂತೆ ಚರ್ಚಿಸಲಾಗಿದೆ.

"ಚೆನ್ನಬಸವ ಪುರಾಣ; ಇಮ್ಮಡಿ ಚಿಕ್ಕಬೋಪಾಲನ ಸಾಂಗತ್ಯ" 'ನವರತ್ನ ಮಾಲಿಕೆ' ಎಂಬ ಕಥೆಗಳಲ್ಲಿ ಈತನ ಪ್ರಾಸಂಗಿಕ ಪ್ರಸ್ತಾಪ ಬರುತ್ತದೆ, ನೇರವಾಗಿ ಕುಮಾರರಾಮನನ್ನು ಕುರಿತು ಹುಟ್ಟಿದ ಸ್ವತಂತ್ರ ಕಾವ್ಯಗಳ ಸಂಖ್ಯಾ ನಿರ್ಣಯ ಇನ್ನು ಸ್ಪಷ್ಟವಾಗಿಲ್ಲವೆಂದು ಹೇಳಬಹುದು, ಒಟ್ಟಿನಲ್ಲಿ ಕುಮಾರರಾಮನನ್ನು ಕುರಿತು ಮಧ್ಯಕಾಲೀನ ಕನ್ನಡ ಸಾಹಿತ್ಯದಿಂದ ತೊಡಗಿ ಆಧುನಿಕ ಕಾಲಘಟ್ಟದವರೆಗೆ ಕುಮಾರರಾಮನ ಕಥೆ ಆಕರ್ಷಕವಾಗಿ ಸಾಹಿತ್ಯ ಕೃತಿಗಳಲ್ಲಿ ಅಭಿವ್ಯಕ್ತವಾಗಿದೆ. 'ಚೆನ್ನರಾಮ ಸಾಂಗತ್ಯ' ಕೃತಿಯಲ್ಲಿ ವಿಶಿಷ್ಟವಾದ ಚರಿತ್ರೆಯ ಅಂಶಗಳನ್ನು ತಿಳಿಸುತ್ತದೆ. ಈ ಕೃತಿಯ ವಿವರ ಹೀಗಿದೆ. ಕಂಪಿಲನ ಆರಾಧ್ಯ ದೈವ ಸೋಮೇಶ್ವರ ಈ ದೇವರ

ಕೃಪೆಯಿಂದ ಮುಮ್ಮಡಿ ಸಿಂಗನಾಯಕನಿಗೆ ಪುತ್ರನೊಬ್ಬನು ಹುಟ್ಟುತ್ತಾನೆ. ಆ ಮಗುವಿಗೆ ಕಂಪಿಲರಾಯ ಎಂದು ಹೆಸರಿಡುತ್ತಾರೆ. ಎಂಬ ಸಂಗತಿ ಈ ಕೃತಿಯಲ್ಲಿ ದೊರೆಯುತ್ತದೆ ಕಂಪಿಲದೇವರಾಯನ ಮಗನಾದ ರಾಮನಾಥನು ತನ್ನ ಶೌರ್ಯ, ಪ್ರಾಮಾಣಿಕ ನಡತೆ ಮತ್ತು ತ್ಯಾಗಗಳಿಗೆ ಪ್ರಸಿದ್ಧಿ ಪಡೆದನೆಂದು ಈ ಸಾಂಗತ್ಯ ಕೃತಿಯಿಂದ ತಿಳಿದು ಬರುತ್ತದೆ.

ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ' ದಲ್ಲಿ ಈ ಬಗೆಗೆ ಕಂಪಿಲನ ಹೊಸಮಲೆ ದುರ್ಗದಲ್ಲಿನ ರಾಜ್ಯಾಡಳಿತ ಕಮ್ಮಟದ ಕೋಟೆಯ ನಿರ್ಮಾಣ ಕುರಿತು ಚಿತ್ರಿಸಲಾಗಿದೆ, ನಂತರ ದೆಹಲಿ ಸುಲ್ತಾನನ್ನು 96 ಲಕ್ಷ ಸೈನಿಕರೊಡನೆ ಕಮ್ಮಟಕ್ಕೆ ಮುತ್ತಿಗೆ ಹಾಕಿದ ಸಂದರ್ಭ ಮೂಡಿಬಂದಿದೆ, ಕಂಪಿಲ–ಕುಮಾರ ರಾಮನಾಥರ ಈ ಕದನದಲ್ಲಿ ಹತರಾದದ್ದು ಮತ್ತು ಇತರ ವಿವರಗಳು ಇವೆ.

ಲಿಂಗಣ್ಣ ಕವಿಯು 'ಕೆಳದಿನೃಪವಿಜಯ' ದಲ್ಲಿ ಕುಮಾರರಾಮ ಮತ್ತು ಕಂಪಿಲರಾಯ ಸಾಮ್ರಾಜ್ಯ ಕಟ್ಟುವ ಸನ್ನಿವೇಶವನ್ನು ತರಲಾಗಿದೆ, ಕೃತಿಯಲ್ಲಿ ದೆಹಲಿ ಸುಲ್ತಾನನ ದಾಳಿಯಿಂದ ವಾರಗಂಲ್ಲಿನ ಕಾಕತೀಯ ವೀರರನ್ನು ಸೆರೆಹಿಡಿದಿದ್ದ ಮಾಹಿತಿ ಕೊಡಲಾಗಿದೆ. ಹೀಗೆ ಮುಂದುವರಿಕೆಯಾಗಿ ವಿದ್ಯಾರಣ್ಯರ ಕಾಲಜ್ಞಾನ, ಚೆನ್ನಬಸವ ಕಾಲಜ್ಞಾನ ಇವೂ ಕೂಡ ಕುಮಾರರಾಮನ ಕುರಿತು ಪ್ರಾಸಂಗಿಕವಾಗಿ ಚಿತ್ರಿಸುತ್ತವೆ.

ಕುಮಾರರಾಮನನ್ನು ಪ್ರಧಾನವಾಗಿರಿಸಿ ಕಾವ್ಯ ರಚಿಸಿದ ಆಧುನಿಕ ಪೂರ್ವ ಕವಿಗಳು ಕುಮಾರರಾಮನ ವೀರ ಜೀವನವನ್ನು ಹಾಡಿ ಹೊಗಳಿದ್ದಾರೆ. ನಂಜುಂಡ ಕವಿಯ ಕುಮಾರರಾಮ ಸಾಂಗತ್ಯ ಪಾಂಚಾಳಗಂಗನು ರಚಿಸಿದ "ಚೆನ್ನರಾಮ ಸಾಂಗತ್ಯ" ಮಹಾಲಿಂಗ ಸ್ವಾಮಿಯು 'ಬಾಲರಾಮನ ಸಾಂಗತ್ಯ' ನಾಗಸಂಗಯ್ಯನ 'ಪರನಾರಿ ಸೋದರ ರಾಮನ ಸಾಂಗತ್ಯ' ಇವುಗಳಲ್ಲದೆ ತೆಲುಗಿನಲ್ಲಿಯೂ ಕುಮಾರರಾಮನ ಬಗ್ಗೆ ರಚನೆಯದ 'ಕುಮಾರರಾಮನೀ ಕಥಾ' ಎಂಬ ಸಾಂಗತ್ಯ ಕೃತಿಗಳು, ಕೈಯಪಿಯತ್ತುಗಳು, ಉದಂತಗಳು ಕುಮಾರರಾಮನನ್ನು ಓರ್ವ ಸಾಂಸ್ಕೃತಿಕ ನಾಯಕನಂತೆ ಕಾಣಲು ಅನುವು ಮಾಡಿಕೊಡುತ್ತವೆ.

ಹೊಸಗನ್ನಡ ಸಾಹಿತ್ಯದಲ್ಲಿಯೂ ಮೂಲಗ್ರಂಥಗಳನ್ನು ಆಧರಿಸಿ ಹಲವಾರು ಬರಹಗಳು ಬಂದಿವೆ.ಕೆಲವು ಪಂಡಿತರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಮುಖ್ಯರಾದವರು ಜಿ.ವರದರಾಜರಾವ್, ದೇ.ಜವರೇಗೌಡ, ಎನ್.ಅನಂತರಂಗಾಚಾರ್,

ಬಿ.ಎಸ್.ಗದ್ದಗೀಮಠ, ಚದುರಂಗ, ಎಮ್.ಎಚ್.ರಾಮಶರ್ಮ, ಹುಲ್ಲೂರ್ ಶ್ರೀನಿವಾಸ್, ಜೋಯಿಸ್ ಕೆ.ರಾಮಕೃಷ್ಣಯ್ಯ ಮೊದಲಾದವರು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಕುಮಾರರಾಮನ ಬಗೆಗೆ ಪೂರಕ ಸಾಹಿತ್ಯ ಮತ್ತು ಐತಿಹಾಸಿಕ ಕೃತಿಗಳನ್ನು ರಚಿಸಿದ್ದಾರೆ.

ಕುಮಾರರಾಮನ ಜೀವನವನ್ನು ವಸ್ತುವಾಗಿರಿಸಿಕೊಂಡು ನಾಟಕಗಳು ರಚನೆಯಾಗಿವೆ, ಕುಮಾರರಾಮನ ಸುಪ್ರಸಿದ್ದ ಕಥೆಯನ್ನು ಆಧರಿಸಿ ವಾಸುದೇವ ಭೂಪಾಲ ಅವರು ರಚಿಸಿದ ಐತಿಹಾಸಿಕ ನಾಟಕ "ಕಮ್ಮಟವಲ್ಲಭ" ಕಮ್ಮಟದ ಬಗ್ಗೆ ಇರುವ ಐತಿಹಾಸಿಕ ಪುರಾವೆಗಳನ್ನು ಒದಗಿಸುತ್ತದೆ.

ವೀರಣ್ಣ ರಾಜೂರ ರವರು ಐತಿಹಾಸಿಕ ಹಿನ್ನಲೆಯುಳ್ಳ 'ರತ್ನಾಜಿ' ಎಂಬ ರೇಡಿಯೊ ನಾಟಕವನ್ನು ರಚಿಸಿದ್ದಾರೆ. ಎಸ್.ಉಮಾಪತಿಯವರು ಕುಮಾರರಾಮನ ಚರಿತ್ರೆಯನ್ನು ವಸ್ತುವಾಗಿರಿಸಿಕೊಂಡು ಎರಡು ನಾಟಕಗಳನ್ನು ರಚಿಸಿದ್ದಾರೆ.

1.'ಪರನಾರಿ ಸೋದರ ಕುಮಾರರಾಮ' ಮತ್ತು

2. 'ಕಡುಗಲಿ ಕುಮಾರರಾಮ' ನಾಟಕ

3. ವಾದಿರಾಜರ ಕನಕಗಿರಿಯವರ 'ಗಂಡುಗಲಿಕುಮಾರರಾಮ'

ಕುಮಾರರಾಮನನ್ನು ವಸ್ತುವಾಗಿರಿಸಿಕೊಂಡು ಆಧುನಿಕ ಸಾಹಿತ್ಯದಲ್ಲಿ ಕಾದಂಬರಿಗಳು ರಚಿತವಾಗಿವೆ. ಕೊರಟಿ ಶ್ರೀನಿವಾಸರಾವ್ ಅವರು ಬರೆದ, 'ಕನ್ನಡಿಗರ ಕಾಳರಾತ್ರಿ' ಮತ್ತು ಕುಮಾರರಾಮ, ರುದ್ರಮೂರ್ತಿ ಶಾಸ್ತ್ರಿ ಬರೆದ 'ಕುಮಾರರಾಮ' ಎಂಬ ಮೂರು ಕಾದಂಬರಿಗಳನ್ನು ಗಮನಿಸಬಹುದು,

ಹೀಗೆ ಕುಮಾರರಾಮನ ಜೀವನ ವೃತ್ತಾಂತವು ಜನರ ಮನಸ್ಸಿನಲ್ಲಿ ಬೇರೂರಿದೆ ಎಂಬುದು ಶಿಷ್ಟಸಾಹಿತ್ಯದಲ್ಲಿ ವಿಫುಲವಾಗಿ ದೊರೆಯುತ್ತದೆ.

# ಅಧ್ಯಾಯ-3

## ಜನಪದ ಸಾಹಿತ್ಯದಲ್ಲಿ ಕುಮಾರರಾಮ

ಜಾನಪದವು ಜನತೆಯ ಗ್ರಂಥಸ್ಥವಲ್ಲದ, ಸಹಸ್ರಾರು ಕಂಠಗಳ ಮೂಲಕ ಹರಿದು ಹುಟ್ಟಿ ಬಂದಿರುವ ಸಂಪ್ರದಾಯದ ಮೊತ್ತವಾಗಿದೆ. "ಶಿಷ್ಟ ಸಾಹಿತ್ಯವು ಹುಟ್ಟುವ ಮೊದಲೇ ಆದಿ ಮಾನವರು ತಮ್ಮ ದೈನಂದಿನ ನೋವು -ನಲಿವುಗಳನ್ನು ಅನಿಸಿಕೆ ಅನುಭವಗಳನ್ನು ಕನಸು – ಕಲ್ಪನೆಗಳನ್ನು ಕ್ರಿಯೆ-ಪ್ರತಿಕ್ರಿಯೆಗಳನ್ನು ಅಲ್ಲದೆ ಬದುಕಿನ ಎಲ್ಲಾ ಮಜಲುಗಳನ್ನು ಮೌಖಿಕವಾಗಿ ಹಾಡಿನ ಮೂಲಕ, ಕಥೆಯ ಮೂಲಕ, ಗಾದೆ-ಒಗಟು ಒಡಪುಗಳ ಮೂಲಕ ತೋಡಿಕೊಂಡರು". ಅಂದರೆ, ಅನಕ್ಷರಸ್ಥರ ಸಾಹಿತ್ಯ ಜಾನಪದವಾದರೆ, ಅಕ್ಷರಸ್ಥರ ಸೃಷ್ಟಿ, ಶಿಷ್ಟಸಾಹಿತ್ಯ, ಜಾನಪದ ಒಂದು ಪರಂಪರೆ, ಅದರ ಒಂದು ಅಂಗ ಜನಪದ ಸಾಹಿತ್ಯ ಇದರಲ್ಲಿ ಪದ್ಯ ಪ್ರಕಾರಗಳು, ಜಾನಪದ ಗೀತೆ, ಲಾವನೆ, ಖಂಡಕಾವ್ಯ ಹಾಗೂ ಜನಪದ ಮಹಾಕಾವ್ಯಗಳು ಎಂಬುದಾಗಿ ವಿಂಗಡಿಸಬಹುದು. ಶಿಷ್ಟಸಾಹಿತ್ಯ ಮಹಾಕಾವ್ಯದ ಹಲವಾರು ಪಾತ್ರಗಳು ಮತ್ತು ಘಟನೆಗಳಿಂದ ಕೂಡಿದ ಗಂಭೀರವಾದ ಛಂದಸ್ಸಿನಲ್ಲಿ ರಚಿತವಾದ ಧೀರ್ಘಕಥೆಯುಳ್ಳ ವಿಸ್ತಾರವಾದ ವ್ಯಾಪ್ತಿಯೇ ಆಗಿದೆ. ಇದು ಒಂದು ಸಾಂಸ್ಕೃತಿಕ ಜನಾಂಗದ ಅಥವಾ ನಾಡಿನ ಜನತೆಯ ಲೋಕ ದೃಷ್ಟಿಯನ್ನು ಆಸೆ-ಆಕಾಂಕ್ಷೆಗಳನ್ನು ಬಿಂಬಿಸುವ ಸಾಧನ ಆದರೆ ಜನಪದ ಮಹಾಕಾವ್ಯ ಕೇವಲ ಓದುವ ಅಥವಾ ವಾಚಿಸುವ ಕಾವ್ಯ ವ್ಯಕ್ತಿಗತ ಕಾವ್ಯವೂ ಅಲ್ಲ ಅದು ಒಂದು ಸಮೂಹದ ಸೃಷ್ಟಿ, ತಮ್ಮ ಇಡೀ ಪ್ರದೇಶದ, ಪರಿಸರದ ಜನಾಂಗದ ಆದರ್ಶವೀರನನ್ನು ಮುಖಂಡನನ್ನು ಅವನು ಮಾಡಿದ ಅಸಾಧಾರಣವಾದ ಸಾಧನೆಗಳನ್ನು ಮತ್ತು ತೋರಿಸಿದ ವಿಶಿಷ್ಟ ಸಾಹಸಗಳನ್ನು ತನ್ನ ಬದುಕಿನ ಮೂಲಕ ಧ್ವನಿಸಿದ ಜೀವನ ತತ್ತವನ್ನು ಸುದೀರ್ಘ ಕಾವ್ಯಗಳ ಮೂಲಕ ಅನನ್ಯವಾಗಿ ಅಭಿವ್ಯಕ್ತಿಸಿದ್ದಾರೆ.

ಜನಪದ ಕಾವ್ಯದಲ್ಲಿ ಏಕಮುಖವಾದ ಅಭಿವ್ಯಕ್ತಿ ಇಲ್ಲಿ ಇದರ ಕರ್ತೃ ಯಾರು ಎಂದು ತಿಳಿಯುವುದಿಲ್ಲ. ಪೀಳಿಗೆಯಿಂದ ಪೀಳಿಗೆಗೆ ಮೌಖಿಕವಾಗಿ ಬೆಳೆಯುತ್ತಾ ಸೃಷ್ಟಿಯಾಗಿರುತ್ತದೆ. ಕಥೆಯ ತಿರುಳು ಮೂಲ ಸೃಷ್ಟಿಯಲ್ಲಿದ್ದರೂ ವಿವರಗಳು ಹಾಡುಗಾರನಿಂದ ಹಾಡುಗಾರನಿಗೆ ಬದಲಾಗುತ್ತಾ ಹೋಗುತ್ತವೆ. ಶಿಷ್ಟಕಾವ್ಯದಲ್ಲಿ ಇದು ಸಾಧ್ಯವಿಲ್ಲ. ಇದು ಒಂದು ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ವ್ಯಕ್ತಿಯಿಂದ ರಚಿತವಾಗಿರುವಂಥದ್ದು ಆದರೆ ಜನಪದ ಕಾವ್ಯ ಪ್ರತಿ ನಿತ್ಯವೂ ಪುನರ್‌ಸೃಷ್ಟಿಯಾಗುತ್ತಲೇ ಹೋಗುತ್ತದೆ. ಇದು ಒಂದು ಸಮುದಾಯದ ಸೃಷ್ಟಿ ಜನಪದ ಮಹಾಕಾವ್ಯಕ್ಕೆ ಚಾರಿತ್ರಿಕ ಅಥವಾ ಸಾಮಾಜಿಕ ಹಿನ್ನಲೆ ಇರುತ್ತದೆ.

ಸಮುದಾಯದ ಅಂದಂದಿನ ಬೇಕು ಬೇಡಗಳು ಇಲ್ಲಿ ಪ್ರಾಧಾನ್ಯತೆಯನ್ನು ಪಡೆದುಕೊಂಡು, ಅಂದಿನ ಕಾವ್ಯ ಇಂದಿನದಾಗಿ ಬದಲಾಗುತ್ತದೆ. ಮೌಖಿಕ ಮಹಾಕಾವ್ಯಗಳಲ್ಲಿ ಶಿಷ್ಟಕಾವ್ಯಗಳಲ್ಲಿರುವ ಹಾಗೆ ಅಷ್ಟಾದಶ ವರ್ಣನೆಗಳಿದ್ದರೂ ಕಂಡದ್ದನ್ನು ಕಂಡ ಹಾಗೆ ನೇರವಾಗಿ ಹೇಳುವ ಪರಿಪಾಠವಾಗಿದೆ. ಸಾಮಾನ್ಯವಾಗಿ ಜನಪದ ಮಹಾಕಾವ್ಯಗಳಲ್ಲಿ ವೀರರ ಸಾಹಸಗಳನ್ನು, ತ್ಯಾಗ ಬಲಿದಾನದ ಕಥೆಗಳನ್ನು ಧಾರ್ಮಿಕ ವ್ಯಕ್ತಿಗಳ ಸಾಧನೆಗಳನ್ನು ವಿವರಿಸುತ್ತಾ ಆಯಾಯ ಸಾಂಸ್ಕೃತಿಕ ವರ್ಗದ ಆದರ್ಶ ವೀರನ ಜೀವನವನ್ನು ಮಹಾಗಾಥೆಯಾಗಿಸುವ ಮಹಾಕಾವ್ಯವಾಗಿಸುವ ಶಕ್ತಿ ಜಾನಪದೀಯ ಕಲ್ಪನೆ ಹಾಗೂ ಕಟ್ಟುವ ಕೆಲಸದಲ್ಲಿ ಸಾಧ್ಯ ಎಂಬುದನ್ನು ಕುಮಾರರಾಮನ ಬಗೆಗೆ ಬಂದ ಜಾನಪದ ಕೃತಿಗಳ ಮೂಲಕ ಗುರುತಿಸಬಹುದು.

ಕುಮಾರರಾಮನ ವಿಚಾರವಾಗಿ ಇತಿಹಾಸಕಾರರ ಅಭಿಪ್ರಾಯಗಳನ್ನು ಗಮನಿಸಬಹುದಾಗಿವೆ. ವಿದೇಶಿ ಚರಿತ್ರೆಕಾರರಾದ  ಬರೌನಿ, ಪೆರಿಷ್ತಾ, ಇಸಾಮಿ, ಇಬ್ನಬತೂತ ನ್ಯೂನಿಜ್ ಇವರ ಹೊತ್ತಿಗೆಗಳು ಕುಮಾರರಾಮನ ಬಗ್ಗೆ ಸುಳಿವು ನೀಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಕುಮಾರರಾಮನ ಇತಿಹಾಸ ತಿಳಿಸುವಲ್ಲಿ ವಿದೇಶಿ ಪ್ರವಾಸಿಗರ ಬರಹಗಳು ಪ್ರಮುಖ ಪಾತ್ರವಹಿಸುತ್ತವೆ. ಅವುಗಳೆಂದರೆ ಫ್ರಾನ್ಸಿಸ್ ಬುಕಾನನ್‌ನ ಪ್ರವಾಸ ವೃತ್ತಾಂತ ಮೆಕಂಜೆಯ ಹಸ್ತಪ್ರತಿ ಹಾಗೂ ಇತರ ಕೈಫಿಯತ್ತು, ಇವುಗಳ ಆಧಾರದ ಮೇಲೆ ಫಾದರ್ ಎಚ್.ಹೆರಾಸ್, ರಾಬರ್ಟಸಿವೆಲ್ ಲೂಯಿರೈಸ್, ವಿನ್ಸಂಟ್‌ಸ್ಮಿತ್ ಮುಂತಾದವರು ಕುಮಾರರಾಮನ ಐತಿಹಾಸಿಕತೆಯನ್ನು ಖಚಿತಪಡಿಸಿದ್ದಾರೆ. ಕುಮಾರರಾಮ ವಾಸಿಸುತ್ತಿದ್ದ ಕೋಟೆ ಕೊತ್ತಲಗಳ ಪ್ರದೇಶಗಳ ಮೇರೆಗಳನ್ನು ಗುರುತಿಸಲು ಪ್ರಯತ್ನಿಸಿದ್ದಾರೆ, ಹೀಗೆ ಚರಿತ್ರೆಕಾರರ ದೃಷ್ಟಿಯಲ್ಲಿ ಕುಮಾರರಾಮ ಕಂಡಿದ್ದಾನೆ. ಇತಿಹಾಸಕಾರರಲ್ಲದೆ ಶಾಸನಗಳಲ್ಲಿಯೂ ಕುಮಾರರಾಮನನ್ನು ಕುರಿತ ಕುರುಹುಗಳು ದೊರಕುತ್ತವೆ. ಕ್ರಿ.ಶ.ಹದಿಮೂರನೆಯ ಶತಮಾನದ ಹರಿಹರ ಶಾಸನವು ಸೇವುಣ ರಾಮಚಂದ್ರನ ಆಳ್ವಿಕೆಯ ಕಾಲಕ್ಕೆ ಸೇರಿದ್ದಾಗಿದೆ, ಮುಮ್ಮಡಿಸಿಂಗ ನಾಯಕನ ಮಗನಾದ ಖಂಡೇರಾಯನು ದೇವಾಲಯವೊಂದಕ್ಕೆ ಹರಿಹರ ಗ್ರಾಮವನ್ನು ಪುನರ್‌ದತ್ತಿಯಾಗಿ ನೀಡುತ್ತಾನೆಂದು ಇದು ತಿಳಿಸುತ್ತದೆ. ಕಂಪಿಲದೇವನಿಗೆ ಖಂಡೇರಾಯ ಎಂಬ ಹೆಸರು ಇತ್ತು, ಹಂಪೆಯ ಹೇಮಕೂಟದ ದೇವಾಲಯವೊಂದರಲ್ಲಿರುವ ಶಾಸನವು ಮುಮ್ಮಡಿಸಿಂಗನಾಯಕನ ಮಗನಾದ ಕಂಪಿಲನು ಸಂಗಮೇಶ್ವರ ದೇವರ ಆರಾಧಕನಾಗಿದ್ದನೆಂದು ತಿಳಿಸುತ್ತದೆ. ತನ್ನ ತಾಯಿ ಮತ್ತು ತಂದೆ ಹಾಗೂ ಪೆರುಮ ನಾಯಕ ಇವರ ಜ್ಞಾಪಕಾರ್ಥವಾಗಿ ಶಿವಾಲಯವೊಂದನ್ನು ಕಟ್ಟಿಸಿದನು. ಅಲ್ಲಿ ಲಿಂಗಗಳನ್ನು ಪ್ರತಿಷ್ಠಾಪನೆ ಮಾಡುತ್ತಾನೆಂದು ಆ ಶಾಸನವು ತಿಳಿಸುತ್ತದೆ. ಕಮ್ಮಟದುರ್ಗದಲ್ಲಿ ಕ್ರಿ.ಶ.1315ರ ವೀರಗಲ್ಲು

ಶಾಸನವನ್ನಾಧರಿಸಿ ಕಂಪಿಲದೇವನು ಹೊಯ್ಸಳ ವಂಶದ ಒಂದು ಶಾಖೆಗೆ ಒಳಪಟ್ಟವನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಹಂಪೆಯ ಪ್ರಸನ್ನ ವಿರೂಪಾಕ್ಷ ದೇವಾಲಯದ ಹತ್ತಿರವಿರುವ, ಕಂಪಿಲರಾಯನಿಗೆ ಸಂಬಂಧಿಸಿದ ಶಾಸನವನ್ನು ಆಧರಿಸಿ ಆರ್.ಎಸ್. ಪಂಚಮುಖಿಯವರು ವಂಶಾವಳಿಯನ್ನು ಈ ರೀತಿಯಾಗಿ ಗುರುತಿಸಿದ್ದಾರೆ,




ಕಮ್ಮಟದುರ್ಗದಲ್ಲಿ ಕಂಡುಬಂದ ವೀರಗಲ್ಲು ಶಾಸನಗಳು, ಸುಲ್ತಾನನ ದಾಳಿಗಳಲ್ಲಿ ರಾಮನಾಯಕ ಮತ್ತು ಸಿಂಗ ಎಂಬ ವೀರರು ಕದನಗಳಲ್ಲಿ ಹೋರಾಡುತ್ತ ಮಡಿದರೆಂದು ತಿಳಿಸುತ್ತವೆ. ಈತನನ್ನು ಕುರಿತ ಶಾಸನಗಳು ಧಾರವಾಡ ಜಿಲ್ಲೆಯ ಸಂಗೂರು, ಬಳ್ಳಾರಿ ಜಿಲ್ಲೆಯ ರಾಮಘಡ ಮತ್ತು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಮೊದಲಾದ ಕಡೆಗಳಲ್ಲಿ ಲಭಿಸಿವೆ. ಕೆಲವು ಕೈಫಿಯತ್ತುಗಳು ದೊರೆತಿವೆ. ಈತನ ಪೂಜೆಗಾಗಿ ದೇವಾಲಯಗಳನ್ನು ಕಟ್ಟಿಸಿರುವ ವಿಚಾರಗಳು ಶಾಸನಗಳಲ್ಲಿ ಉಕ್ತವಾಗಿವೆ. ಹೀಗೆ ಶಾಸನಗಳಲ್ಲಿ ಕುಮಾರರಾಮನ ಅಸ್ತಿತ್ವ ಮತ್ತು ಅವನ ಮನೆತನದ ಬಗ್ಗೆ ವಿವರಗಳು ಸಿಗುತ್ತವೆ.

ಕುಮಾರರಾಮನ ಕಥೆ ಲಿಖಿತ ಮಾಧ್ಯಮಗಳಲ್ಲಿ ಪ್ರಸಾರಗೊಳ್ಳುವ ಪೂರ್ವದಲ್ಲಿಯೇ ಮೌಖಿಕ ಪರಂಪರೆಯಲ್ಲಿ ಮುಂದುವರಿದುಕೊಂಡು ಬಂದಿದೆ. ಜನಪದ ಸಾಹಿತ್ಯದ ವಿವಿಧ ಪ್ರಕಾರಗಳಾದ ಹಾಡು, ಕಥೆ, ಕಥನಗೀತೆ, ಮಹಾಕಾವ್ಯಗಳಲ್ಲಿ ಬಿಂಬಿತವಾಗಿದೆ. ಜನಪದ ರಂಗಕಲೆಗಳಾದ ತೊಗಲು ಗೊಂಬೆಯಾಟ, ಬಯಲಾಟ, ಸಣ್ಣಾಟ, ಯಕ್ಷಗಾನಗಳಲ್ಲಿ ಕುಮಾರರಾಮನ ಚರಿತ್ರೆ ಮೂಡಿಬಂದಿದೆ. ಜನಪದ ಆಚರಣೆ ಸಂಪ್ರದಾಯಗಳಾದ ಶೂಲದ ಹಬ್ಬ ಮತ್ತು

ಜಾತ್ರೆಗಳಲ್ಲಿ ಅವರ ಕಥೆ ಹರಡಿಕೊಂಡಿದೆ. ಜನಪದರ ನಂಬಿಕೆ, ಆಚರಣೆ, ಸಂಪ್ರದಾಯಗಳಲ್ಲಿ ಉತ್ಸವ ಪರ್ವಗಳಲ್ಲಿ ಒಟ್ಟಾರೆ ಸಾಂಸ್ಕೃತಿಕ ಬದುಕಿನಲ್ಲಿ ಆತ ಚಿರಸ್ಮರಣೀಯನಾಗಿದ್ದಾನೆ. ನುಡಿಗಟ್ಟಿನಿಂದ ಮಹಾಕಾವ್ಯದವರೆಗೆ ಜನಪದ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಿವೆ. ಇಲ್ಲಿ ಹಬ್ಬ ಹರಿದಿನ ಮೊದಲಾದ ಆಚರಣೆಗಳಲ್ಲಿ ಕುಮಾರರಾಮನ ಜೀವನ ಅಭಿವ್ಯಕ್ತವಾಗಿದೆ. ಉದಾತ್ತನಾಯಕನಾದ ಕುಮಾರರಾಮನ ಜೀವನವು ಅವನು ಬದುಕಿರುವಾಗ ಅಥವಾ ತೀರಿಹೋದ ಮೇಲೆ ದಂತಕಥೆಯ ಸ್ವರೂಪ ಪಡೆದು ಕೊಂಡಿದೆ. ಅವನ ಭವ್ಯ ಜೀವನವನ್ನು ಜನಪದ ಕವಿಗಳು ಮಹಾಕಾವ್ಯದ ವ್ಯಾಪ್ತಿಯಲ್ಲಿ ವರ್ಣಿಸಿರುವುದು ಗಮನಾರ್ಹ. ಕುಮಾರರಾಮನ ದುಂದುಮೆ, ಜಗ್ಗಲಿಗೆಯ ಹಾಡು, ಲಾವಣಿ, ತಂಬೂರಿ ಸಂಪ್ರದಾಯ ಹೀಗೆ ಗೀತೆಯ ನಾನಾ ಪ್ರಕಾರಗಳಲ್ಲಿ ಪ್ರಸಾರ ಗೊಂಡಿದ್ದಾನೆ. "ಬಿ.ಎಸ್.ಗದ್ದಿಗಿಮಠ ಅವರು ಸಂಪಾದಿಸಿರುವ 'ಜನಪದ ಗೀತೆಗಳು' ಎಂಬ ಸಂಕಲನದಲ್ಲಿ ಕುಮಾರರಾಮನನ್ನು ವಸ್ತುವಾಗಿರಿಸಿಕೊಂಡ 'ಕಂಪಲಿ' ಮತ್ತು 'ಕರ್ನಾಟಕದ ಕಂದ' ಎಂಬ ಎರಡು ಗೀತೆಗಳಿವೆ. ಇಲ್ಲಿ ನೈತಿಕ ಮೌಲ್ಯದ ರಕ್ಷಣೆಗೆ ಬದ್ಧನಾದ ಅವನನ್ನು ಬಲಾತ್ಕಾರದ ಅಪವಾದ ಹೊರಿಸಿ ದುರಂತಕ್ಕೆ ಈಡು ಮಾಡಲಾಯಿತು. ಎಂಬುದೇ ಈ ಗೀತೆಗಳ ಕಥಾವಸ್ತು". ಕುಮಾರರಾಮನನ್ನು ಕುರಿತು ಜನಪ್ರಿಯವಾದ ಹಾಡುಗಳಿರುವಂತೆಯೇ ಜನಜನಿತವಾದ ಕಥೆಗಳೂ ಇವೆ. ಇವನ ಕುರಿತು ಗೊಂದಲಿಗರು, ಬುರ್ರಕಥಾ,ಬಾಲನಾಗಮ್ಮ ಸಂಪ್ರದಾಯದವರು ಈ ಕಥೆಯನ್ನು ಧೀರ್ಘವಾಗಿ ಮತ್ತು ಆಕರ್ಷಣೀಯವಾಗಿ ಹೇಳುತ್ತಾರೆ. ಕುಮಾರರಾಮನ ಜೀವನ ಜನಪದ ಸಾಹಿತ್ಯ ಪರಂಪರೆಯಲ್ಲಿ ಕಥೆ ಕಾವ್ಯವಾಗಿ ಉಳಿದು ಬೆಳೆದುಕೊಂಡು ಬಂದಿದೆ. ಮೌಖಿಕವಾದ ಈ ಶಬ್ದ ಮಾಧ್ಯಮದ ಜೊತೆಗೆ ಜನಪದ ಸಂಪ್ರದಾಯ ಆಚರಣೆಗಳಲ್ಲಿಯೂ ಸ್ಥಾನ ಪಡೆದುಕೊಂಡ ಸಂಗತಿಗಳು ಸಿಗುತ್ತವೆ. ಕನ್ನಡ ನಾಡಿನ ವಿವಿಧೆಡೆಗಳಲ್ಲಿ ಕುಮಾರರಾಮನ ದೇವಾಲಯಗಳಿದ್ದು, ಆತನ ಹೆಸರಿನಲ್ಲಿ ಜಾತ್ರೆಗಳು ನಡೆಯುವುದನ್ನು ಇಂದಿಗೂ ಕಾಣುತ್ತೇವೆ. ಕಮ್ಮಟದುರ್ಗದಲ್ಲಿಯೇ ಕುಮಾರರಾಮನ ಜಾತ್ರೆ ನಡೆಯುವುದು ಇದಕ್ಕೆ ನಿದರ್ಶನ. ದರೋಜಿ ಹತ್ತಿರದ ರಾಂಪುರದಲ್ಲಿ ಚಂಡಿನಾಟದ ಉತ್ಸವ ನಡೆಯುತ್ತದೆ. 'ಕೊರಟಗೆರೆ' ಮತ್ತು 'ಸುಲದಾಳ'ಗಳಲ್ಲಿಯೂ ಕುಮಾರರಾಮನ ದೇವಾಲಯಗಳಿದ್ದು ಪ್ರತಿವರ್ಷ ಜಾತ್ರೆ ನಡೆಯುತ್ತದೆ.

ಇತ್ತೀಚಿನ ಕೆಲವು ಪಂಡಿತರ ಪ್ರಯತ್ನದಿಂದ ಕುಮಾರರಾಮನಿಗೆ ಸಂಬಂಧಿಸಿದ ಕೆಲವು ಸಮಸ್ಯೆಗಳಿಗೆ ಸ್ವಲ್ಪಮಟ್ಟಿನ ಪರಿಹಾರ ದೊರಕಿದೆ. ಕುಮಾರರಾಮನು ಐತಿಹಾಸಿಕ ವ್ಯಕ್ತಿಯೆಂದು ಗುರುತಿಸಲು ಈ ಕೆಳಕಂಡ ಅಂಶಗಳು ಸಹಾಯಕವಾಗಿವೆ.

1. ಹಂಪೆ ಮತ್ತು ಜಟ್ಟಂಗಿರಾಮೇಶ್ವರಗಳಲ್ಲಿ ಕುಮಾರರಾಮನ ಸ್ಮರಣಾರ್ಥ ಪ್ರದೇಶಗಳಿರುವುದು.

2. ಹಾನಗಲ್ಲಿನ ಮಾಡೂರು, ಮಲಗುಂದ, ಶಿರಗೋಡ, ತುಮಕೂರು,ಕೊರಟಗೆರೆ ತಾಲ್ಲೂಕು, ದೊಡ್ಡಪಾಲನಹಳ್ಳಿ ಸಿದ್ದಾಪುರ ತಾಲ್ಲೂಕು ಮೊದಲಾದ ಕಡೆಗಳಲ್ಲಿ ಇರುವ ಅವನ ದೇವಾಲಯಗಳು.
3. ಕ್ರಿ.ಶ. 1407 ರ ಹಾವೇರಿ ಬಳಿಯ ಸಂಗೂರಿನ ಶಾಸನ ಕ್ರಿ.ಶ 1532ರ ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ಶಾಸನ. ಕ್ರಿ.ಶ. 1528 ರಲ್ಲಿ ಸಂಡೂರಿನ ರಾಮಘಡದಲ್ಲಿ ದೊರೆತ ಶಾಸನ ಲಿಖಿತ ಕಾವ್ಯಗಳಿಂದ ಭಿನ್ನವಾದ ಪಠ್ಯಗಳನ್ನು ಜಾನಪದ ಲೋಕ ಸೃಷ್ಟಿಸಿಕೊಂಡಿದೆ. ಗದ್ಧಿಗೀಮಠರು ಸಂಗ್ರಹಿಸಿದ ಕುಮಾರರಾಮನ ದುಂದುಮೆ, ಜಯ ಪ್ರಕಾಶ ಮಾವಿನ ಕುಳಿಯವರು ಸಂಗ್ರಹಿಸಿದ 'ತಂಪಿನ ರಾಜನ ಮಗಳು', ಜೀ.ಶಂ. ಪರಮಶಿವಯ್ಯನವರು ವಿವರಿಸಿದ 'ಚನ್ನಿಗ ರಾಮ', ಡಾ.ಕೆ.ಎಂ ಮೈತ್ರಿಯವರು ಸಂಪಾದಿಸಿದ 'ಕುಮಾರರಾಮ ಮತ್ತು ಕೃಷ್ಣ ಗೊಲ್ಲರ ಮಹಾಕಾವ್ಯ'ಗಳಲ್ಲಿ ಕುಮಾರರಾಮನನ್ನು ಕುರಿತು ಹೆಚ್ಚು ಮಾಹಿತಿಗಳು ದೊರೆತಿವೆ.

ಡಾ.ಕೆ.ಎಂ ಮೈತ್ರಿ ಸಂಪಾದಿಸಿರುವ ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ ಎಂಬ ಗ್ರಂಥದಲ್ಲಿ ಈ ಕೆಳಗಿನಂತೆ ಕುಮಾರ ರಾಮನ ಕತೆಯನ್ನು ನೋಡಬಹುದು.

<u>ಪ್ರಾರ್ಥನೆ</u>

1. ಜಟಿಂಗೇಶ್ವರನ ಪ್ರಸಾದ
2. ಕುಮಾರರಾಮ ಓಲಿಕೆ ರಾಮನ ಜನನ
3. ಕಲ್ಲುಥೇರು
4. ವಿದ್ಯಾಭ್ಯಾಸ
5. ಪಾತರಗಿತ್ತಿ
6. ಕುಮಾರರಾಮನ ಶೋಕ ಕಂಪಿಲನ ಬುದ್ಧಿವಾದ
7. ಮೀನ್ಹಿಡಿಯೋ ಅಂಬಿಗರು
8. ದೇವತಾ ಕುದುರೆಗಳು
9. ಓರಗಲ್ಲು ವಿಜಯ
10. ಡಿಲ್ಲಿ ನವಾಬುದಾರನೊಂದಿಗೆ ಯುದ್ಧ
11. ರತ್ನಾಜಿಯ ಮದುವೆ
12. ಕಂಪ್ಲಿರಾಜ ಬೇಟೆಗಾಗಿ ಆರಂಡಿಗೆ
13. ಮುತ್ತಿನ ಚೆಂಡಿನಾಟ
14. ಮುತ್ತಿನ ಚೆಂಡಿನ ಹುಡುಕಾಟ

15. ಬಚ್ಚಣ್ಣನ ಚಾತುರ್ಯ
16. ರತ್ನಾಕ್ಷಿಯ ಮರಣ
17. ಹುಸೇನಿಯ ಜನನ ವಿದ್ಯಾಭ್ಯಾಸ
18. ಹುಸೇನಿಯೊಂದಿಗೆ ಕುಮಾರರಾಮನ ಯುದ್ಧ
19. ಹರಿಯಾಳ ದೇವಿಯ ಪ್ರಲಾಪ
20. ಹುಸೇನಿಯ ಆತ್ಮಹತ್ಯೆ
21. ಕುಮಾರರಾಮನ ಆರಂಡಿ ಪ್ರವೇಶ

4. ಜಿ. ವರದರಾಜರಾವ್ ಅವರು ತಮ್ಮ ನಿಬಂಧದಲ್ಲಿ ಉಲ್ಲೇಖಿಸಿರುವ ಇತ್ತೀಚಿನ 'ತಜ್‌ಕೆರಾತುವ್ ಅವಾಲಿಯಾ' ಎಂಬ ಉರ್ದು ಗ್ರಂಥವಿದ್ದು, ತನ್ನ ಪೌರುಷ ಮತ್ತು ಶೌರ್ಯ ಗುಣಗಳಿಗೆ ಹೆಸರಾದವನು ಕುಮಾರ ರಾಮನಾಗಿದ್ದಾನೆ. ಕೆಚ್ಚೆದೆಯ ವೀರ, ಕಲಿ, ಜಟ್ಟಿ ಇತ್ಯಾದಿ ಗೌರವಗಳಿಗೆ ಪಾತ್ರನಾದ ಕಮ್ಮಟದ ಯುವರಾಜ ಒಟ್ಟಾರೆಯಾಗಿ ಕರ್ನಾಟಕದ ಇತಿಹಾಸದಲ್ಲಿ ಒಂದು ಚಿಕ್ಕರಾಜ್ಯದ ಅರಸು ಮನೆತನವಾಗಿದ್ದ ಕಮ್ಮಟ ರಾಜ್ಯ ಕುಮಾರರಾಮನಿಂದಾಗಿ ಜನಪದ ಸಾಹಿತ್ಯ ಪರಂಪರೆಯಲ್ಲಿ ಸ್ಥಾನ ಪಡೆದಿರುವ ಸಂಗತಿ ಗಮನಾರ್ಹವಾಗಿವೆ. ಹೀಗೆ ಜನಪದ ಸಾಹಿತ್ಯದ ಪ್ರಕಾರಗಳಾದ ಕಥೆ, ಕಾವ್ಯ, ಆಚರಣೆ, ಸಂಪ್ರದಾಯ, ನಂಬಿಕೆ ಇವುಗಳಿಗೆ ಕುಮಾರರಾಮ ನಾಯಕ ಈತನ ಬಗೆಗೆ ಅಸ್ಟಿಷ್ಟು ಐತಿಹಾಸಿಕ ಮಾಹಿತಿಗಳು ದೊರೆಯುತ್ತವೆ. ಜನಪದರಲ್ಲಿ ಒಬ್ಬ ಐತಿಹ್ಯ ವೀರನಾಗಿ ಚಿರಸ್ಮರಣೀಯನಾಗಿದ್ದಾನೆ.

ಜಟಿಂಗೇಶ್ವರನ ವರಪ್ರಸಾದದಿಂದ ಕಂಪಿಲ ಮತ್ತು ಹರಿಯಾಲದೇವಿಗೆ ಕುಮಾರರಾಮ ಹುಟ್ಟುತ್ತಾನೆ. ಜಟಿಂಗ ರಾಮೇಶ್ವರನ ಪ್ರಸಾದವಾದ ಬಾಳೆಹಣ್ಣನ್ನು ಸಿಪ್ಪೆ ಸುಲಿದು ಹಣ್ಣನ್ನು ಹರಿಯಾಲದೇವಿ ತಿಂದು ಸಿಪ್ಪೆಯನ್ನು ಬಿಸಾಡುವಾಗ ಕೆಳಗಿದ್ದ ದಾಸಿಯು ಸ್ವಾಮಿಯ ಪ್ರಸಾದ ಎಂದು ಕೆಳಗಿದ್ದ ಬಾಳೆ ಹಣ್ಣಿನ ಸಿಪ್ಪೆಯನ್ನು ತಿನ್ನುತ್ತಾಳೆ ಅವಳಿಗೆ ಒಂದು ಗಂಡು ಮಗು ಜನಿಸುತ್ತದೆ. ಆ ಮಗುವಿಗೆ ಓಲಿಕೆ ರಾಮ ಎಂದು ಹೆಸರಿಡಲಾಗುತ್ತದೆ. ಇಬ್ಬರು ಮಕ್ಕಳನ್ನು ತುಂಬ ಸುಖವಾಗಿ ಸಾಕುತ್ತಾರೆ.

ಇವರಿಬ್ಬರಿಗೂ ಗುರುಗಳಿಂದ ವಿದ್ಯೆಯನ್ನು ಕಲಿಸುತ್ತಾರೆ. ಕುಮಾರರಾಮನಿಗಿಂತ ಓಲಿಕೆರಾಮ ತುಂಟಾಟದಲ್ಲಿ ಮುಂದಿದ್ದನು.

ವಿದ್ಯೆ ಕಲಿಸಿದ ಗುರು ನೋಡಿದ

ಏ. ಒಟ್ಟಿಗ್ಹುಟ್ಟಿದವನು ಎಷ್ಟು ಬಿಗಿ

ಎಷ್ಟು ಬಲ ಐದಿಯಪ್ಪಾ

ಹಣ್ಣೆಗ್ಹುಟ್ಟಿದವ್ನು ಎಷ್ಟಿನ್ನು ಮೆದುವು ಇದಾನಪ್ಪ

ಎಷ್ಟು ನಿಧಾನದ ಮನುಷ್ಯನು

ಓಹೋ ಆಗ ಅಣ್ಣಗಿನ್ನ ತಮ್ಮ ಒಂದುಪಾವಲಿ

ಹೆಚ್ಚು ಐದಾನ ಬಲ ಏನಪ್ಪಾಂತ.

ಡಾ.ಕೆ.ಎಂ.ಮೈತ್ರಿ (ಸಂ) ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ (ಪು.14)

ಹೀಗೆ ಕುಮಾರರಾಮನಿಗಿಂತ ಓಲಿಕೆರಾಮ ಬಲಶಾಲಿಯಾಗಿದ್ದ ಎಂದು ತಿಳಿದು ಬರುತ್ತದೆ.

ಕುಮಾರರಾಮ ಓಲಿಕೆರಾಮ ದೊಡ್ಡವರಾಗಿ ತನ್ನ ಗೆಳೆಯರೊಡನೆ ಆಟ ಆಡಿ ಬರುತ್ತಾ ಇರುವಾಗ ಆನೆಗೊಂದಿ ಪಟ್ಟಣದಲ್ಲಿ ಮೂರು ಅಂತಸ್ತಿನ ಮಾಳಿಗೆ ಮೇಲೆ 'ಪಾತರಗಿತ್ತಿ' ಎಂಬ ಹೆಣ್ಣುಮಗಳು ಹುಣಸೆ ತಪ್ಲ ಸೀರೆ ರಾಗಿ ತಪ್ಲಕುಬಸ ತೊಟಕಂಡು ಮೊಣಕಾಲು ತನಕ ಕೂದಲ ಬಿಟ್ಟು ಕೊಂಡಿರುವ ಪಾತರಗಿತ್ತಿಯನ್ನು ಓಲಿಕೆರಾಮ ನೋಡಿ ಅವಳ ಮೇಲೆ ಮನಸ್ಸಾಗುತ್ತದೆ. ಮನೆಗೆ ಹೋಗಿ ಊಟಮಾಡಿ ಎಲ್ಲರು ಮಲಗುತ್ತಾರೆ. ಆದರೆ ಓಲಿಕೆರಾಮನಿಗೆ ನಿದ್ರೆ ಬರದೆ ಎದ್ದು ಯಾರಿಗೂ ಗೊತ್ತಾಗದ ರೀತಿ ಹೊರಗೆ ಬರುತ್ತಾನೆ. ಅತ್ತ-ಇತ್ತ ನೋಡಿ ಪಾತರಗಿತ್ತಿ ಮನೆಗೆ ಬಂದು ಬಾಗಿಲು ತಟ್ಟಿದಾಗ ಯಾರ್ರೀ ನೀವು ನಿಮ್ಮ ಜಾತಿ ಏನು? ನಿಮ್ಮ ತಂದೆ ಯಾರು? ನಿಮ್ಮ ತಾಯಿ ಯಾರು? ಎಂದು ಕೇಳಿದಾಗ

ನಮ್ಮ ತಂದಿ ಹಿರೇಕಂಪ್ಲಿರಾಜ

ಆಗ ವಟ್ಟಿಗೆ ಹುಟ್ಟಿದೋನು ಓಲಿಕಾನಾ

ಹಣ್ಣೆಗೆ ಬೆಳೆದೋನು ನಮ್ಮಣ್ಣ ರಾಮ

ಹರಿಯಾಳದೇವಿ ಮಗ ಎಂದು ಹೇಳಿದಾಗ ಏನು ತಂದಿಯಾ ನನಗೆ ಎಂದು ಕೇಳುತ್ತಾಳೆ. ಪಾತರಗಿತ್ತಿಯ ಸಹವಾಸ ಮಾಡಿ ಆನೆಗೊಂದಿ ಪಟ್ಟಣದಲ್ಲಿ ಕಳ್ಳತನ ಮಾಡಲು ಪ್ರಾರಂಬಿಸುತ್ತಾನೆ. ಕಳ್ಳತನದಲ್ಲಿ ತಳಾರನಿಂದ ಕೈಗೆ ಬೇಡಿ ಹಾಕಿಸಿ ಕೊಂಡು

ಜೈಲಿಗೆ ಹೋಗುತ್ತಾನೆ. ಇದನ್ನು ಕಂಡು ಕುಮಾರರಾಮ ನೊಂದುಕೊಂಡು ಗೋಳಾಡುತ್ತಾನೆ.

ಓಲಿಕೆರಾಮನು ಕುಮಾರರಾಮನನ್ನು ಹೋಲುವಂತಿದ್ದರೂ ತನ್ನಲ್ಲಿದ್ದ ಕಾಮಾಪೇಕ್ಷೆಯಿಂದಾಗಿ ಕಳ್ಳತನ ಮಾಡಿ, ಪಾತರಗಿತ್ತಿಯನ್ನು ಸಮಾಧಾನ ಪಡಿಸುತ್ತಾನೆ. ಹೆಣ್ಣಿನಲ್ಲಿರುವ ರೂಪ, ಲಾವಣ್ಯ ಯಾವ ಗಂಡನ್ನು ಚಂಚಲ ಸ್ವಭಾವದವನನ್ನಾಗಿ ಮಾಡುತ್ತದೆಂಬುದಕ್ಕೆ ಓಲಿಕೆರಾಮ ಉದಾಹರಣೆಯಾಗಿದ್ದಾನೆ. ಕುಮಾರರಾಮ ಓಲಿಕೆರಾಮರಲ್ಲಿ ಸೋದರ ಭಾವನೆಯ ಅಪೂರ್ವತೆ ವ್ಯಕ್ತವಾಗಿದೆ. ಓಲಿಕೆ ರಾಮನು ಪಾತರಗಿತ್ತಿಯ ಸಹವಾಸದಿಂದ ಸೆರೆಮನೆಲ್ಲಿರಬೇಕಾದ ಸಂದರ್ಭದಲ್ಲಿ ಕುಮಾರ ರಾಮನ ದುಃಖವು ಮನಕಲಕುವಂತಿದೆ.

ತಮ್ಮ ನನ್ನ ಎಡಗೈ ಲೋಕವವ್ನೆ ತಮ್ಮಾ
ತಮ್ಮ ಬಂದ ಮಾತನ್ನು ಹೇಳಲ್ಲಿ ತಮ್ಮಾ
ತಮ್ಮಾ ಬಂದ ಬಂದ ಮಾತನ್ನು ಹೇಳಿಲ್ಲಪ್ಪ ॥ತಂದಾನ॥
ಅಂಥವನ ಕೂಟ ನಾವು ಮಾತನಾಡುವುದಿಲ್ಲ
ಯಾಪ್ಪಾ ಮಗ್ನೆ ಅಂದು ತಾಯಿ ದುಃಖಪಡುತ್ತಾಳೆ. ಯಾಕೆ ಅಳಿತ್ತಿಯಪ್ಪ
ತಮ್ಮಗೆ ನನಗೆ ಋಣ ಇಲ್ಲ ವಮ್ಮಾ
ಎಂಥವನು ಕರ್ಮಿಷ್ಟಗೇಡಿ ತಂದೀ ॥ ತಂದಾನ ॥

ಕುಮಾರರಾಮ ಅಪ್ರತಿಮ ವೀರ ಎನ್ನುವುದಕ್ಕೆ ಓರಂಗಲ್ಲನ ಅಧಿಪತಿ ಗಣಪತಿಯ ಮಗ ಗಣ ರಾಮನನ್ನು ಸಂಹರಿಸಿ, ಗಣಪತರಾಜನನ್ನು ಸೋಲಿಸಿ, ವಜ್ರ ವೈಢೂರ್ಯ, ಮುತ್ತು ರತ್ನ ಏಳು ದಾಡೇವು ಚಂದ್ರಾಯುಧ, ಹಾಗೂ ಎರಡು ರೆಕ್ಕೆ ನಾಲ್ಕು ಪಾದದ ದೇವತಾ ಕುದುರೆ ಗೆದ್ದು ವಿಜಯಶಾಲಿಯಾಗಿ ಆನೆಗೊಂದಿ ಕಂಪ್ಲಿಗೆ ಮರಳುತ್ತಾನೆ. ಗಣಪತಿರಾಜ ದೆಹಲಿ ನವಾಬನಿಗೆ ಕಪ್ಪ ಕಾಣೆಕೆಗಳನ್ನು ಕಳುಹಿಸುತ್ತಿರುವುದನ್ನು ತಿಳಿದ ಕುಮಾರರಾಮ ಇನ್ನು ಮುಂದೆ ದೆಹಲಿ ನವಾಬನಿಗೆ ಕೊಡಬೇಕಾದ ಹಣವನ್ನು ಮತ್ತು ಕಪ್ಪಕಾಣೆಕೆಗಳನ್ನು ತನಗೆ ಒಪ್ಪಿಸಬೇಕು. ಎಂದು

ಶರತ್ತು ಹಾಕುವ ಮೂಲಕ, ಡೆಲ್ಲಿ ನವಾಬನಿಗೆ ಪತ್ರವೊಂದನ್ನು ಬರೆದು ಆನೆಗೊಂದಿ ಕಂಪ್ಲಿಗೆ ಯುದ್ಧಕ್ಕೆ ಬರುವಂತೆ ಆಹ್ವಾನಿಸುತ್ತಾನೆ.

ಯುದ್ಧಕ್ಕೆ ಬಂದ ದಿಲ್ಲಿ ನವಾಬುನನ್ನು ಯುದ್ಧದಲ್ಲಿ ಸೋಲಿಸಿ. ನವಾಬದಾರನ ಗಡ್ಡ ಮೀಸೆಗಳನ್ನು ಕತ್ತರಿಸುವನು. ಭಯಭೀತನಾದ ಜೀವ ರಕ್ಷಣೆಗಾಗಿ ನವಾಬುದಾರ ಇನ್ನು ಮುಂದೆ ಯಾವಾಗಲೂ ಆನೆಗೊಂದಿ ಕಡೆಗೆ ಬರುವುದಿಲ್ಲವೆಂದು ಹೇಳಿ ಹೊರುಡುತ್ತಾನೆ.

ರಾಮ ಸತ್ರೆ ಬರೋದಿಲ್ಲ

ನಿಮ್ಮ ಆನೆಗೊಂದಿಗೆ ರಾಮ

ಸಲಾಂ ಮಾಡ್ತಿನಿ

ಈಗ ನನ್ನ ಗಡ್ಡ ಕೊಯ್ಯಿಬೇಡ

ನನ್ನ ಜೀವ ಕಳೀ ಬ್ಯಾಡ

ಆಂಧ್ರೆಲ್ಲಾ ನನಗಿರ್ಲಿ

ಕರ್ನಾಟ ನಿಂದೇ ಇರ್ಲಿ

ಅರ್ಧ ಊರು ಇನಾಮು ಕೊಟ್ಟಂಗ

ಆರ್ಧ ಲೋಕ ನಿನಗ ಸಂಬಳ ಕೊಟ್ಟಂಗ

ಡಾ ॥ ಕೆ.ಎಂ. ಮೈತ್ರಿ (ಸಂ), ಕುಮಾರರಾಮ ಮತ್ತು ಕೃಷ್ಣಕೊಲ್ಲರ ಮಹಾಕಾವ್ಯ (ಪು) 108

ರತ್ನಾಜಿಯ ಮದುವೆ.

ರಾಮನಿಗೆ ಹೆಣ್ಣು ನೋಡಿ ಮದುವೆ ಮಾಡಬೇಕು ಅಂತ ಮನೆಯಲ್ಲಿ ಮಾತಾಡಿಕೊಂಡು ಸೋದರ ಮಾವ ಬಚ್ಚಣ್ಣನಿಗೆ ಒಪ್ಪಿಸಿದರು. ರಾಮನನ್ನು ನಿಲ್ಲಿಸಿ ಬಂಗಾರದ ಫೋಟೋ ತೆಗೆಸಿ ಪೋಟೊ ತೆಗೆದು ಕೊಂಡು ರಾಮನಿಗಿನ್ನ ಒಂದು ಪಾವಲಿಯಷ್ಟು ಬಣ್ಣ ಹೆಚ್ಚಿರುವ ಹೆಣ್ಣನ್ನು ಹುಡುಕಿಕೊಂಡು ಹೊರಟರು. ಇಪ್ಪತ್ತು ಹಳ್ಳಿ ಹುಡುಕಿದ್ರು ರಾಮನಿಗೆ ತಕ್ಕ ಹೆಣ್ಣು ಸಿಗಲಿಲ್ಲಿ. ಕೊನೆಗೆ ಚಿತ್ರಗೇರಿ ಪಟ್ಣದಾಗ ಚಾವುಲಿರಾಜನ ಮಗಳು ರತ್ನಾಜಿ ರಾಮನಿಗಿನ್ನ ಒಂದು ಪಾವಲಿ ತೂಕ ಬಣ್ಣದಲ್ಲಿ

ಹೆಚ್ಚಿದ್ದಾಳೆ. ಅವಳು ಇಂಗ್ಲೀಷ್, ಮರಾಠಿ, ಹಿಂದಿ ಮೊದಲಾವುಗಳನ್ನು ಅಭ್ಯಸಿಸಿ ವಿದ್ಯಾವಂತಳಾಗಿದ್ದಳು. ಸುಂದರಿಯಾದ ಈಕೆ ಆನೇಕ ಗಂಡುಗಳ ಭಾವಚಿತ್ರಗಳನ್ನು ತೋರಿಸಿದರು. ಯಾರನ್ನು ಒಪ್ಪದೆ ನಿರಾಕರಿಸುತ್ತಾಳೆ. ಆದರೆ ರಾಮನ ಪೋಟೋ ವನ್ನು ನೋಡಿದ ತಕ್ಷಣ ಒಪ್ಪಿಕೊಳ್ಳುತ್ತಾಳೆ. ಈ ಪೋಟೋ ತಂದವರಾರು ಎಂದಾಗ ನಾನೇ ಬಚ್ಚಣ್ಣ ಇವರು ತಳವಾರ್ರು ಎಂದಾಗ ನನಗೆ ರಾಮನ ಪೋಟೋ ಕೊಟ್ಟು ನನ್ನ ಪೋಟೋ ರಾಮನಿಗೆ ತೋರಿಸಿ ಎಂದು ಹೇಳುತ್ತಾಳೆ. ಆ ಪೋಟೋ ತೆಗೆದು ಕೊಂಡು ಮನೆಗೆ ಹೋದಾಗ ಕಂಡ ಕಂಪಿಲರಾಜ ರತ್ನಾಜಿಗೆ ಮನಸೋಲುತ್ತಾನೆ.

ಕಂಪ್ಲಿರಾಜ ಇನ್ನ ನೋಡಿದ್ನಮ್ಮ

ಚಿಕ್ಕೇಣ್ತೆ ಅಂತ ಬಾರ್ಲ ಬಿದ್ದ ಬಿಟ್ಟ

ಪೋಟೋ ಮೇಲೆ ಚಂಪೆ ಚಂಪೆ ಮುದ್ದು ಕೊಡ್ತಾನ

ಯಪ್ಪಾ ಭಾವಮೈದ ಆ ಕಾಲಕ್ಕೆ ನಿಮ್ಮ ಅಕ್ಕನ ಕೊಟ್ಟಿ

ಈ ಕಾಲಕ್ಕೆ ಈ ರತ್ನಾಜಿಯ ನನಗೆ ಮಾಡ್ಬೇಕು

ನನ್ನ ಜೀವ ನಿಂದ್ರದಿಲ್ಲಂತ ಚಂಪಿ ಚಂಪಿ ಮುದ್ದು ಕೊಡ್ತಾನ

ಡಾ॥ ಕೆ.ಎಂ ಮೈತ್ರಿ (ಸಂ) ಕುಮಾರರಾಮ ಮತ್ತು ಕೃಷ್ಣ ಗೊಲ್ಲರ ಮಹಾಕಾವ್ಯ ಪ್ರ 119–120

ಕಂಪಿಲರಾಜ ರತ್ನಾಜಿಯ ಚಿತ್ರಪಟವನ್ನು ನೋಡಿದ ತಕ್ಷಣವೇ ಅದಕ್ಕೆ ತನ್ನ ಬೊಚ್ಚು ಬಾಯಿಯಲ್ಲಿ ಮುತ್ತು ಕೊಡುತ್ತಾನೆ. ತನ್ನ ಭಾವ ಮೈದುನ ಬಚ್ಚಣ್ಣನಿಗೆ ಹೇಗಾದರೂ ಮಾಡಿ ಆಕೆಯನ್ನು ತನಗೇ ಮದುವೆ ಮಾಡಿಸುವಂತೆ ದುಂಬಾಲು ಬೀಳುತ್ತಾನೆ. ಅದಕ್ಕೊಪ್ಪಿದ ಬಚ್ಚಣ್ಣ ಕುಮಾರರಾಮನ ಹೆಸರಲ್ಲಿ ಮದುವೆಯನ್ನು ನಿಶ್ಚಯಿಸಿ ಮೋಸದಿಂದ ಮುಖಕ್ಕೆ ಕಂಬಳಿಯನ್ನು ಹೊದಿಸಿ ರತ್ನಾಜಿಯ ಕೊರಳಿಗೆ ಕಂಪಿಲರಾಜನ ಕೈಯಿಂದ ತಾಳಿಯನ್ನು ಕಟ್ಟಿಸುತ್ತಾನೆ. ಇದನ್ನು ಕೊನೆಗೆ ತಿಳಿದ ರತ್ನಾಜಿ ಕಂಪಿಲ ರಾಜನನ್ನು ಹೀಯಾಳಿಸಿ ದೂರತಳ್ಳುತ್ತಾಳೆ. ಕಾಮಾಂಧೆಯಾದ ರತ್ನಾಜಿ ಕುಮಾರರಾಮನೊಂದಿಗೆ ಕೂಡುವುದಕ್ಕಾಗಿ ಹಂಬಲಿಸುತ್ತಾಳೆ, ಹೇಗಾದರೂ ಮಾಡಿ ಕುಮಾರರಾಮನನ್ನು ಪಡೆಯುವ ಶಪಥ ಮಾಡುತ್ತಾಳೆ.

ತಂದಿಗೆ ಕಟ್ಟಿ ಏನ್ಯೆತೋ ರಾಮ ನನಗೆ ಗಂಡಯೋ ಏನ ಆನೆಗೊಂದಿ ನಾನಾಗಿ ರಾಮನ್ನ ಎಷ್ಟು ದಿನ ನೋಡೇನ ಎನ್ನುವಲ್ಲಿ ಕುಮಾರರಾಮನ ತಂದೆ ತನಗೆ ತಾಳಿಕಟ್ಟಿದರೇನು? ತನ್ನಮನಸ್ಸಿಗೆ ಮತ್ತುದೇಹಕ್ಕೆ ಕುಮಾರರಾಮನೇ ಗಂಡ ಎಂದು ಹೇಳುವುದರ ಮೂಲಕ ಹಂಬಲಿಸುತ್ತಾಳೆ. ಅರಮನೆಯಲ್ಲಿ ಕುಮಾರ ರಾಮನ ನೆನಪಿನಲ್ಲಿ ವಿರಹದಿಂದ ಕಾಲ ಕಳೆಯುತ್ತಾಳೆ.

ಕುಮಾರ ರಾಮನು ಮುತ್ತಿನ ಚೆಂಡಿನಾಟವಾಡುವ ಆಸೆಯನ್ನು ವ್ಯಕ್ತಪಡಿಸುತ್ತಾನೆ. ಜಟ್ಟಿಗರನ್ನು ಕರೆಸಿ ಅವರೊಂದಿಗೆ ಆಟವಾಡಲು ಹಾಗೂ ಮುತ್ತಿನ ಚೆಂಡನ್ನು ಅವರು ಎತ್ತಲು ಸಾಧ್ಯವಾಗದಾದಾಗ ತನ್ನ ತಮ್ಮನಾದ ಓಲಿಕೆ ರಾಮನನ್ನು ಸೆರೆಮನೆಯಿಂದ ಬರ ಮಾಡಿಕೊಂಡು ಅವನೊಂದಿಗೆ ಆಟವಾಡಲು ಪ್ರಾರಂಭಿಸುತ್ತಾನೆ. ಇತ್ತ ರತ್ನಾಜಿ ದಾಸಿಯಿಂದ ಕುಮಾರರಾಮ ಯಾರೆಂಬುದನ್ನು ತಿಳಿಯುತ್ತಾಳೆ. ಅವಳಿಂದ ಭಾಷೆಯನ್ನು ತೆಗೆದು ಕೊಂಡು ಮನೋದೇವತೆಯನ್ನು ನೆನೆದು ಆ ಮುತ್ತಿನ ಚೆಂಡು ನನ್ನ ಹತ್ತಿರ ಬರುವಂತೆ ಮಾಡಿ ಕುಮಾರರಾಮನನ್ನು ಮಹಡಿಯ ಮೇಲೆ ಹುಡುಕಲು ಬರುವಂತೆ ಮಾಡುತ್ತಾಳೆ.

ಮಹಡಿಯ ಮೇಲೆ ಬಂದ ರಾಮನಿಗೆ ತನ್ನ ಆಸೆಯನ್ನು ಈಡೇರಿಸುವಂತೆ ಬೇಡಿಕೊಳ್ಳುತ್ತಾಳೆ. ಅದಕ್ಕೆ ಕುಮಾರರಾಮನು ಹೀಗೆ ನುಡಿಯುತ್ತಾನೆ

ಪಾಪಿ ಮಾತ ನುಡಿಬ್ಯಾಡ ನಾನುಮಗ ಇದೀನಿ

ಏ ಕರ್ಮ ಮಾತನ ನುಡಿಬ್ಯಾಡ ಜೀವದಲ್ಲಿ ನನ್ನ ತಾಯಿ ॥ತಂದಾನ॥

ಎಂದು ಬುದ್ಧಿವಾದ ಹೇಳುವ ಮೂಲಕ ಅವಳ ಬಯಕೆಯನ್ನು ನಿರಾಕರಿಸುತ್ತಾನೆ. ಬಚ್ಚಿಟ್ಟಿದ್ದ ಚೆಂಡು ಮತ್ತೆ ಮೇಲಕ್ಕೆ ಪುಟಿಯುತ್ತದೆ. ಅದನ್ನು ಹಿಡಿಯುವ ಪ್ರಯತ್ನದಲ್ಲಿ ಮೇಲಕ್ಕೆ ಎಗುರಿದಾಗ ರತ್ನಾಜಿ ಚಂದ್ರಾಯುಧ ಖಡ್ಗದಲ್ಲಿ ಆತನ ಬಟ್ಟೆಯ ಚೂರನ್ನು ಕತ್ತರಿಸಿ ಕೊಳ್ಳುತ್ತಾಳೆ. ಅದನ್ನು ಸಾಕ್ಷಿಯನ್ನಾಗಿ ಬಳಸಿಕೊಂಡ ರತ್ನಾಜಿ ಬೇಟೆಯಿಂದ ಬಂದ ಕಂಪಿಲರಾಯನಿಗೆ ಸುಳ್ಳುಮಾತುಗಳಿಂದ ಕುಮಾರರಾಮ ಮಾನಭಂಗ ಮಾಡಲು ಪ್ರಯತ್ನಿಸಿದ. ಎಂದು ಹೇಳುತ್ತಾಳೆ. ಕಂಪಿಲರಾಯ ರಾಮ ಅಂಥವನಲ್ಲ ಎನ್ನುತ್ತಾನೆ.

ಥೀ ಅಂಥೋನಲ್ಲ ರಾಮಯ್ಯ

ಹೆಣ್ಮಕ್ಕಳ ಕೂಟ ಮಾತಾಡೋನಲ್ಲ

ಕಣ್ಣೆತ್ತಿ ನೋಡುವವನಲ್ಲ ಎಂದಾಗ

ನೋಡು ನಿನ್ನಮಗನ ಬಟ್ಟೆ ಎಂದು ತೋರಿಸಿದಾಗ ನಿಜವೆಂದು ನಂಬಿ ರಾಮನನ್ನು ಕೊಲ್ಲಲು ಆಜ್ಞೆ ಮಾಡುತ್ತಾನೆ. ಕಟುಗರ ಕೈಯಲ್ಲಿನ ಕೊಡಲಿ ಕುಮಾರರಾಮನ ಕತ್ತಿನಲ್ಲಿ ಹೂವಿನ ಹಾರವಾಗಿ ಕಾಣುತ್ತದೆ. ಅವನ ಸಹಾಯಕ್ಕಾಗಿ ಓಲಿಕೆರಾಮ ತನ್ನ ಶಿರಚ್ಛೇದ ಮಾಡಿಕೊಳ್ಳುವ ಮೂಲಕ ತನ್ನ ಅಣ್ಣನನ್ನು ಕಾಪಾಡುತ್ತಾನೆ. ಕುಮಾರರಾಮನ ತಲೆಯೇ ಅಲ್ಲವೆಂದು ರತ್ನಾಜಿ ನಿರಾಕರಿಸುತ್ತಾಳೆ.

ಇತ್ತ ಕಡೆಗೆ ಕುಮಾರರಾಮನು ಅಂತ್ಯವಾದ ವಿಷಯ ತಿಳಿದ ದೆಲ್ಲಿಯ ಸುಲ್ತಾನ (ನವಾಬ) ಮತ್ತೊಮ್ಮೆ ಆನೆಗುಂದಿಗೆ ಯುದ್ಧಕ್ಕೆ ಬರುತ್ತಾನೆ. ಆಗ ನೆಲಮಾಳಿಗೆಯಲ್ಲಿದ್ದ ಕುಮಾರರಾಮ ಬಂದು ತನ್ನ ಕಂಪಿಲ ಮತ್ತು ತಾಯಿಯನ್ನು ಕಾಪಾಡುವುದರ ಮೂಲಕ ಆನೆಗೊಂದಿ ರಾಜ್ಯವನ್ನು ರಕ್ಷಿಸುತ್ತಾನೆ.

ಸತ್ತಿರುವನೆಂದು ತಿಳಿದಿದ್ದ ಕುಮಾರರಾಮ ಬದುಕಿದ್ದಾನೆ. ಎಂದು ತಿಳಿದ ಕಂಪಿಲ ರಾಜ ತನ್ನ ಹೆಂಡತಿ ರತ್ನಾಜಿಯ ತಲೆ ಕತ್ತರಿಸಲು ಆದೇಶಿಸುತ್ತಾನೆ.

ಇಹೋ ರತ್ನಾಜಿಯ ಕೈಕಾಲ ಕಟ್ಟಿ

ಸುಣ್ಣದ ಭಟ್ಯಾಗ ಹಾಕ್ರಿ

ಹೀಗೆ ಹೋಟ್ಬಾಗ ಹುಟ್ಟಿದ ಮಕ್ಕಳನ್ನು

ಜೀವ ಕಡಿಸೋಳು ಇರಬಾರ್ದು ಆನಗೂಂದೀಲಿ

ಅಂತಾ ರತ್ನಾಕ್ಷಿಮತಿ ಬಳಕ್ಕೆ ಬಂದು

ಕೈ ಕಾಲು ಕಟ್ಟಿಗ್ಯಂಡು ಬಂಡಿಮ್ಯಾಲೆ ಹಕ್ಯಂಡು

ಸುಣ್ಣದ ಭಟ್ಯಾಗ ಹಾಕಿದ್ರು

ಈಗ ಕುತಕುತ ಕುದಿವಾಗ ಏನಂತಾಳ

ನೋಡ್ರಪ್ಪ ಜೀವದ ರಾಮ ಬರಬೇಕು.

ಒಂದು ಮಾತು ಜೀವಕ್ಕ ಜೀವ ಕೊಟ್ಟು ಜೀವ ಬಿಡ್ತೀನಿ

ಅಷ್ಟುತನಕ ನಾಜೀವ ಬಿಡಕಿಲ್ಲ ಆನೆಗುಂದ್ಯಾಗ

ಡಾ ॥ ಕೆ.ಎಂ ಮೈತ್ರಿ (ಸಂ) ಕುಮಾರರಾಮ ಮತ್ತು ಕೃಷ್ಣ ಗೊಲ್ಲರ ಮಹಾಕಾವ್ಯ

ರತ್ನಾಜಿಯು ಸಾಯುವಾಗ ಹೀಗೆ ಹೇಳುತ್ತಾಳೆ

ಈ ಅವತಾರದಲ್ಲಿ ಕಲೀಲಿಲ್ಲದಿದ್ರೆ

ಸಾಯಬ್ರು ಅವತಾರ ಹುಟ್ಟಿಬರ್ತಿನಿ

ಆಗ್ನ ಕಲಿಬೇಕೋ ರಾಮಯ್ಯ ಎಂದಾಗ ರಾಮ

ಛೀ ಅಮ್ಮಾ ನೀನು ಮೂರು ಅವತಾರಲ್ಲ

ಈ ಲೋಕದಾಗ ಎಷ್ಟು ಅವತಾರ ತಾಳಿದ್ರೂ

ನೀನೊಂದು ತಾಯಮ್ಮಾ ನಾನೊಂದು ಮಗಮ್ಮೋ.

ಎಂದಾಗ ರಾಮಾ ಅಂತ ಜೀವ ಬಿಟ್ಟು ಬಿಟ್ಟಪ್ಪ ರಾತ್ನಾಜಿ ಹೀಗೆ ರಾಮನನ್ನು ಸೇರಲು ತನ್ನ ಮನಸ್ಸಿನ ಆಸೆ ನೇರವೇರಿಸಿ ಕೊಳ್ಳಲು ಮಾಡಿದ ಪ್ರಯತ್ನಗಳೆಲ್ಲ ವಿಪಲವಾಗುತ್ತೆವೆ. ಮುಂದಿನ ಜನ್ಮದಲ್ಲಿಯಾದರೂ ನವಾಬನ ಮಗಳಾಗಿ ಹುಟ್ಟಿ ಬರುತ್ತೇನೆ. ಎಂಬ ಶಪಥ ಮಾಡುತ್ತಾಳೆ. ಅದೇ ಪ್ರಕಾರ ರತ್ನಾಜಿ ಡಿಲ್ಲಿಯ ನವಾಬನ ಮಗಳಾಗಿ ಜನಿಸುತ್ತಾಳೆ ಅವಳಿಗೆ ಸಡಗರದಿಂದ ಹುಸೇನಿ ಎಂದು ಹೆಸರಿಡುತ್ತಾರೆ.

ಗುರುವಿನಿಂದ ಹುಸೇನಿಗೆ ನವಾಬನು ಎಲ್ಲಾ ವಿದ್ಯೆಗಳನ್ನು ಕಲಿಸಿದ. ಹುಸೇನಿಯು ಸೈನ್ಯದೊಂದಿಗೆ ಆನೆಗುಂದಿಗೆ ಮುತ್ತಿಗೆ ಹಾಕುತ್ತಾಳೆ. ಪರಾಕ್ರಮಿ ಕುಮಾರರಾಮನು ಸೈನ್ಯ ದೊಂದಿಗೆ ಸಿದ್ಧನಾಗಿ ಯುದ್ಧಕ್ಕೆ ಎದುರಾಗುತ್ತಾನೆ.

ಹುಸೇನಿ ಕತ್ತಿ ಹಿಡಿದು ಕುದುರೆ ಹತ್ತಿ ಸೈನ್ಯ ಮುನ್ನೆಡೆಸುತ್ತಾ ಸೈನಿಕರ ತಲೆಗಳನ್ನು ಕತ್ತರಿಸುತ್ತಾ ಮುಂದೆ ಬಂದಳು ಕುಮಾರ ರಾಮನ ಕಡೆಯ ಹಲವಾರು ಸೈನಿಕರು ಮಡಿದಿದ್ದರೆ ಅದನ್ನು ನೋಡಿ ಕುಮಾರರಾಮನಿಗೆ ಭಯ ಪ್ರಾರಂಭವಾಗಿ ವೀರಾ ವೇಷವಾಗಿ ಹೋರಾಡಲು ಮುನ್ನುಗಿದ ಆದರೆ ಹುಸೇನಿ ಹೆಣ್ಣುಮಗಳು ಎಂದು ತಿಳಿದು ತನ್ನ ಕೈಯಲ್ಲಿದ್ದ ಚಂದ್ರಾಯುಧ ಕೆಳಗೆ ಹಾಕಿದ.

ಯಮ್ಮಾ ತಾಯಾಗಿ ನೀನಮ್ಮ ಮಗನಾಗಿ ನಾನಮ್ಮ

ಯಮ್ಮಾ ಮಗನ್ನ ನೋಡಾಕ್ಕೇ ಬಂದೇನೆ.

ಆನೆಗುಂದಿ ಲೋಕಕ್ಕೆ ಎಂದು ಹೇಳುತ್ತಾನೆ. ಅದಕ್ಕೆ ಹುಸೇನಿ ಅರವತ್ತು ಪೋಟೋ ತಂದ್ರು ಅದ್ರೆ ನಾನು ಯಾವ ಪೋಟೋ ಕಣ್ಣೆತ್ತಿ ನೋಡಿಲ್ಲ ನಿನ್ನ ಪೋಟೋ ನೋಡಿ ಮೆಚ್ಚಿಕೊಂಡೆ ಅದರೆ ನಿಮ್ಮ ತಂದೆ ಕಂಬಳಿ ಹೊದ್ದು ಮೋಸಮಾಡಿ ತಾಳಿ ಕಟ್ಟಿದ. ಆ ಅವತಾರದಲ್ಲಿ ನಿನ್ನ ಸೇರಲಿಕ್ಕೆ ಆಗಲಿಲ್ಲ ಈಗ ಡಿಲ್ಲಿ ನವಾಬರ ಮಗಳಾಗಿ ಹುಟ್ಟಿದೀನಿ, ಈಗನ್ನ ಕರೀಯಯ್ಯ ಕೈಯಾನ್ನ ಹಿಡಿಯಯ್ಯ ಎಂದು ಬೇಡಿ ಕೊಳ್ಳುತ್ತಾಳೆ.

ರಾಮ ನಾನು ನಿನ್ನ ಮಗನಮ್ಮ ಎಂದಾಗ ನಿನ್ನ ರಾಜ್ಯ ಕೊಡು, ಕಪ್ಪಕಾಣಿಕೆ ಕೊಡು, ಇಲ್ಲಾಂದ್ರೆ ಅದಕ್ಕೆ ರಾಜ್ಯವ ಕೊಡುವುದಿಲ್ಲ ಕಪ್ಪನು ಕೊಡಲ್ಲ ಅಂದಾಗ ಕುಮಾರರಾಮನ ತಲೆಯನ್ನು ಕಡಿದು ಡಿಲ್ಲಿಗೆ ತೆಗೆದು ಕೊಂಡು ಹೋಗುತ್ತಾಳೆ, ಆರುಂಡವನ್ನು ನೋಡಿ ದುಃಖಿಸುತ್ತಾಳೆ. ತಾನು ಸಾಯುತ್ತಾಳೆ.

ರಾಮನ ಸಾವನ್ನು ಕೇಳಿ ಹರಿಯಾಳ ದೇವಿಯು ದುಃಖ ಮಡುಗಟ್ಟಿತು. ಬಂಗಾರದ ಸಿಂಹಾಸನದ ಮ್ಯಾಲೆ ರಾಮನ ತಲೆ ಕುಂತುಬಿಡ್ತು. ಹಡೆದತಾಯಿ ಜೀವ ಬೆಳೆಸಿದ ತಾಯಿ ಬಂದು ಸೆರಗು ಒಡ್ಡಿದ್ರೆ ಡಿಲ್ಲಿ ಪಟ್ನಬಿಟ್ಟು ಹೋಗ್ತಿನಿ. ಅಂಥ ಹೇಳಿತು ಆ ಸುದ್ದಿ ಕೇಳಿ ಹರಿಯಾಲದೇವಿ, ಬಚ್ಚಣ್ಣ, ಕಂಪಿಲರಾಜ, ಸೋದರ ಅತ್ತೆ, ಹಂಪಕ್ಕೆ, ಇವರು ಡೆಲ್ಲಿಗೆ ಬಂದರು ಹರಿಯಾಲದೇವಿ ಮುತ್ತಿನ ಸೆರಗೊಡ್ಡಿ.

ಸತ್ತು ಮ್ಯಾಲ, ನನ್ನ ಮಗನೆ ಏನು ಯುದ್ಧ ಮಾಡ್ತಿ ಬಾರಪ್ಪ

ಮಗನೆ ಇನ್ನ ಲೋಕ ಬ್ಯಾಡಂದ್ರೆ ಆರಂಡೆ ರಾಮವಾದ್ಯಪ್ಪ

ಯಪ್ಪಾ ಹೋಗಿ ಬಿಟ್ಟೆ ರಾಮಯ್ಯ ಇನ

ಲೋಕ ಬಿಟ್ಟೆ ರಾಮಯ್ಯ ॥ ತಂದಾನ ॥

ತಾಯಿ ದುಃಖ ಮಾಡಿ ಸೆರಗು ಬಡ್ಡಿದ್ರೆ

ಸಿಂಹಾಸನದ ಮ್ಯಾಲೆ ಕಂತಾ ತಲಿನೋಡ

ಗರ್-ಗರ್ ತಿರುಕ್ಯಂತ

ಇನ ತಲೆ ಬಂದ್ಯೆತೋ

ಸಿಂಹಾಸನ ಬಿಟ್ಯೋ

ತಾಯಿ ಉದ್ಯಾಗ ಬಿಡ್ಯೆತೋ ರಾಮನ ತಲೆ ನೋಡನ್ನ ರಾಮನ ತಲೆಯನ್ನು ಆಗ ಡಿಲ್ಲಿಯಲ್ಲದ್ದ ಆನೆ ಗುಂದಿಗೆ ತರತಾಳ. ಕುಮಾರರಾಮನ ತಲೆ ದೆಹಲಿ ನವಾಬನ ಸಿಂಹಸನದಲ್ಲಿಯೂ ಮುಂಡ ಆನೆಗುಂದಿಯಲ್ಲಯೂಇರುವ ವೈಚಿತ್ರ್ಯವನ್ನು ಕಾಣಬಹುದೆಂಬುದು ಜನಪದರು ವಿವರಿಸುತ್ತಾರೆ. ತಲೆ ಮತ್ತು ಮುಂಡ ಎರಡೂ ಒಂದು ಗೂಡಿ ಮತ್ತೆ ಕುಮಾರರಾಮನಾಗಿ, ಜೀವನದ ಜಿಗುಪ್ಸೆಯೊಂದಿಗೆ ಕಾಡನ್ನು ಪ್ರವೇಶಿಸುತ್ತಾನೆ. ಮೂರು ಜನ್ಮ ಪಡೆಯುವ ರತ್ನಾಜಿ ಮೂಲಕ ಪ್ರಕೃತಿಯ ವೈಚಿತ್ರವನ್ನು ಅಸಾಮಾನ್ಯ ವ್ಯಕ್ತಿತ್ವದ ಕುಮಾರರಾಮನನ್ನು ನಾವು ಕಾಣಬಹುದು ಹೀಗೆ ರತ್ನಾಜಿಯ ಭಗ್ನಪ್ರೇಮ ಮರು ಜನ್ಮದಲ್ಲಿ ಕುಮಾರರಾಮನ ಅಂತ್ಯಕ್ಕೆ ಕಾರಣವಾಗುವುದರೊಂದಿಗೆ ಇಡೀ ಸಾಮಾಜ್ಯವು ಅಸ್ತಂಗತವಾಗುವ ಚಿತ್ರ ಕುಮಾರರಾಮನ ಕಾವ್ಯದಲ್ಲಿ ಕಾಣುತ್ತೇವೆ.

ರಾಮ ಜೀವ ಬಿಟ್ಟಮೇಲೆ ನಾನೇಕೆ ಬದುಕಬೇಕು ಅಂತ ಚಂದ್ರ ಆಯುಧ ಹಿಡಿದು ಗರ-ಗರ್ ತಿರುಗಿಕೊಂಡು ತನ್ನ ರುಂಡವನ್ನು ರಾಮ ಅಂತ ಕತ್ತರಿಸಿ ಕೊಂಡು ಬಿಟ್ಟಳು ಆಗ ಹುಸೇನಿ ತಂದೆ ನವಾಬ ಮಗಳ ಮೇಲೆ ಬಿದ್ದು ಆಳುತ್ತಾ ಹೊರಳಾಡಿ ಮಗಳನ್ನು ಆನೆಗೊಂದಿಲ್ಲಿ ಸಮಾಧಿ ಮಾಡಿದ ದರಗ ಹುಸೇನಂತ.

ಹುಸೇನಿ ಇಲ್ಲೇ ಇರಬೇಕಮ್ಮ

ನನ ಮಗಳೆ ಆನೆ ಗುಂದ್ಯಾಗಂತ

ಆಗ ಸಮಾಧಿ ಕಟ್ಟಿ

ಬಣ್ಣದ ಶಲ್ಲೇವು ಹೊದಿಸಿ

ಆಗ ದಡಿ ಅಂತ ಮಲ್ಲಿಗೆ ಹೂ ಹಾಕಿದ

ಹೀಗೆ ರಾಮ ಸಿಗಲಿಲ್ಲವೆಂದು ತನ್ನ ತಲೆಯನ್ನೇ ತಾನೇ ಕತ್ತರಿಸಿಕೊಳ್ಳುವ ದೃಶ್ಯ ಹೃದಯ ವಿದ್ರಾವಕವಾದದ್ದು,

ಈ ದೃಶ್ಯದಲ್ಲಿ ದಿಲ್ಲಿಯ ನವಾಬ ಮಗಳ ಪ್ರೇಮಕ್ಕೆ ಒಪ್ಪಿಗೆ ಕೊಟ್ಟು ಮಗಳ ಆಸೆಯನ್ನು ನೇರವೇರಿಸಲು ಪ್ರಯತ್ನಿಸುತ್ತಾನೆ. ಹಿಂದೂ ಮುಸ್ಲಿಂ ಎಂಬ ಬೇಧವಿಲ್ಲದೆ ನವಾಬ ಮಗಳ ಪ್ರೇಮಕ್ಕೆ ಒಪ್ಪಿಗೆ ಕೂಡುವುದನ್ನು ಕಾಣಬಹುದು. ಅವಳ ಆಸೆಯನ್ನು ನೇರವೇರಿಸಲು ಹುಸೇನಿ ಸತ್ತ ನಂತರ ಆನೆಗೊಂದಿಯಲ್ಲಿ ಸಮಾಧಿಮಾಡುವುದು ತುಂಬ ವಿಶಿಷ್ಟವೆನಿಸುತ್ತದೆ, ಪ್ರೀತಿ ಅಮರ ಎಂಬುದನ್ನು ಈ ಘಟನೆ ತಿಳಿಸುತ್ತದೆ.

ಕಮ್ಮಟದುರ್ಗ, ಹೊಸಮಲೆ ದುರ್ಗಗಳಲ್ಲಿನ ಆನೇಕ ವಿವರಗಳು ಕುಮಾರರಾಮನ ಕುರಿತಾಗಿ ಕಾವ್ಯಗಳಲ್ಲಿ ಕಂಡುಬರುತ್ತವೆ, ಕಂಪ್ಲಿ, ಜಟ್ಟಂಗಿ ರಾಮೇಶ್ವರ, ರಾಮಪ್ಪನ ದೂಣೆ, ಕಾಟಪ್ಪನ ಗುಡ್ಡ, ಬೊಲ್ಲದ ಗುಂಡು ಬಾದರನ ಬಂಡೆ, ಮಾವಿನ ಹಂಪಯ್ಯನ ಗುಡ್ಡ ಮೊದಲಾದ ಸ್ಥಳಗಳ ಉಲ್ಲೇಖಗಳು ಕಾವ್ಯಗಳಲ್ಲಿ ಬಂದಿವೆ. ಕುಮಾರರಾಮ, ಕಂಪಿಲ ಬಚ್ಚಣ್ಣ, ಕಾವಣ್ಣ, ಮಾದಿಗರ ಹಂಪ, ಹರಿಹರ – ಬುಕ್ಕ ಮೊದಲಾದ ಚಾರಿತ್ರಿಕ ವ್ಯಕ್ತಿಗಳು ಅದೇ ಹೆಸರಿನಲ್ಲಿ ಕಾವ್ಯದಲ್ಲಿ ಸ್ಥಾನ ಪಡೆದಿದ್ದಾರೆ. ಮುಮ್ಮಡಿ ಸಿಂಘೆಯ, ಕಂಪಿಲ, ಕುಮಾರರಾಮ ಕಮ್ಮಟ, ಹೊಸಮಲೆ ದುರ್ಗಗಳಲ್ಲಿ ಆಳಿಕೊಂಡಿದ್ದನ್ನು ಕಾವ್ಯಗಳು ದೃಢಪಡಿಸಿವೆ. ಕಂಪಿಲದಲ್ಲಿ ನಡೆಸಿದ ಯುದ್ಧಗಳನ್ನು ಕೂಡ ಕವಿಗಳು ವರ್ಣಿಸಿದ್ದಾರೆ, ಮಧ್ಯಕಾಲೀನ ಕರ್ನಾಟಕದ ವೀರ ಪ್ರಧಾನ ಜೀವನವೆಲ್ಲ ಕಾವ್ಯಗಳಲ್ಲಿ ಮರು ಸೃಷ್ಟಿಗೊಂಡಿವೆ. ವಿವಿಧ ಬಗೆಯ ಯುದ್ಧ ತಂತ್ರಗಳು, ರಕ್ಷಣಾ ತಂತ್ರಗಳು, ಸೈನಿಕ ಪಡೆಗಳು, ನಂಬುಗೆ ಆಚರಣೆಗೆಳೆಲ್ಲಿವನ್ನು ಈ ಕಾವ್ಯಗಳಲ್ಲಿ ಕಾಣಬಹುದಾಗಿವೆ. ಇದೇ ರೀತಿಯಿಲ್ಲ ಜಾನಪದ ಮರು ಸೃಷ್ಟಿಗಳು ಕೂಡ ಕಂಪಿಲ ಕುಮಾರರಾಮರ ಬಗ್ಗೆ ಅಪಾರವಾದ ಕಾಳಜಿಯನ್ನು ವ್ಯಕ್ತಪಡಿಸಿವೆ.

ಅಡಿಟಿಪ್ಪಣಿಗಳು

1. ಕಮ್ಮಟ ದುರ್ಗದ ಅರಸರು
   ಡಾ ॥ ಮಹಾದೇವ
   ಹಂಪಿ ಕನ್ನಡ ವಿಶ್ವವಿದ್ಯಾಲಯ
2. ತಳವಾರ ಎನ್.ಎಮ್ ಕೃತಿ ಕುಮಾರರಾಮನ ಸಾಂಗತ್ಯಗಳು
   2002 ಪುಟ 11–12
3. ತಳವಾರ ಎನ್.ಎಮ್ ಕೃತಿ ಕುಮಾರರಾಮನ ಸಾಂಗತ್ಯಗಳು
   2002 ಪುಟ 11–12

# ಅಧ್ಯಾಯ – 4

## ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿ ಕುಮಾರರಾಮನ ತೌಲನಿಕ ಅಧ್ಯಯನ.

# ಅಧ್ಯಾಯ – 4

## ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದಲ್ಲಿ ಕುಮಾರರಾಮನ ತೌಲನಿಕ ಅಧ್ಯಯನ.

ಶಿಷ್ಟಸಾಹಿತ್ಯದಲ್ಲಿ ಕುಮಾರರಾಮನನ್ನು ಕುರಿತು ವಿಫುಲವಾದ ಸಾಹಿತ್ಯ ರಚನೆಯಗಿದೆ. ನಂಜುಂಡ ಕವಿ ಬರೆದಿರುವ 'ರಾಮನಾಥ ಚರಿತೆ" ಪಾಂಚಾಳ ಗಂಗನು ಬರೆದಿರುವ 'ಚನ್ನಿಗರಾಮನ ಸಾಂಗತ್ಯ' ಮತ್ತು ಮಹಾಲಿಂಗ ಸ್ವಾಮಿ ಬರೆದಿರುವ 'ಬಾಲರಾಮನ ಸಾಂಗತ್ಯ' ಸಂಸ್ಕೃತ ಸಂಶೋಧನ ಸಂಸತ್‌ದಲ್ಲಿ 'ಹಳೆಯ ಕುಮಾರರಾಮನ ಸಾಂಗತ್ಯ' ಕಂಪಲಿಯ ಶ್ರೀ ದೊಡ್ಡನ ಗೌಡರ ಮನೆಯಲ್ಲಿ ದೊರೆತಿರುವ 'ಹೊಸಕುಮಾರರಾಮನ ಸಾಂಗತ್ಯ' ಈ ಕೃತಿಗಳಲ್ಲಿ ಚಿತ್ರಿತವಾಗಿರುವ ಕುಮಾರರಾಮನಿಗೂ ಜನಪದ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಕುಮಾರರಾಮನಿಗೂ ಹಲವಾರು ಹೋಲಿಕೆಗಳು ಮತ್ತು ವ್ಯತ್ಯಾಸಗಳು ಕಂಡು ಬರುವುದನ್ನು ತೌಲನಿಕವಾಗಿ ಅಧ್ಯಯನ ಮಾಡಿ ಗುರುತಿಸಲಾಗಿದೆ.

ಶಿಷ್ಟಸಾಹಿತ್ಯದಲ್ಲಿ ಕುಮಾರರಾಮನ ವಂಶಾವಳಿಯ ಬಗ್ಗೆ ಮಾಹಿತಿ ದೊರೆಯುತ್ತದೆ ಮತ್ತು ಪ್ರಾರಂಭವು ರಾಮನ ವಂಶಜರಿಂದಲೇ ಪ್ರಾರಂಭವಾಗುತ್ತದೆ. "ಬೇಡಜಾತಿಯ ಮುಮ್ಮಡಿ ಸಿಂಗನು ಮಲೆಪಲ್ಲಿ ದೇಶದಲ್ಲಿ ನಾಡ ತಳವಾರ ನಾಗಿದ್ದನು, ಮುಮ್ಮಡಿ ಸಿಂಗಿನಾಯಕನಿಗೆ ಬಹುದಿನಗಳವರೆಗೆ ಮಕ್ಕಳಾಗದಿರಲು ಕಂಪಲಿಯ ಸೋಮೇಶ್ವರನಿಗೆ ಹರಕೆಹೊರಲು ಹೆಂಡತಿ ಮಾರಮ್ಮ ಗರ್ಭಿಣಿಯಾಗಿ ಗಂಡುಮಗುವಿಗೆ ಜನ್ಮವಿತ್ತಳು. ಆ ಮಗುನಿಗೆ 'ಕಂಪಿಲ' ಎಂದು ನಾಮಕರಣ ಮಾಡುತ್ತಾರೆ".[1] ನಂಜುಂಡ ಕವಿಯ 'ರಾಮನಾಥ ಚರಿತೆಯಲ್ಲಿ ಹಂಪೆಯ ಕ್ಷೇತ್ರದಲ್ಲಿ ಕಂಪಿಲರಾಯ ಮತ್ತು ಹರಿಯಾಲದೇವಿಗೆ ಬಹಳದಿನಗಳಾದರೂ ಮಕ್ಕಳಾಗದಿದ್ದಕ್ಕೆ ಜಟ್ಟಂಗಿ ರಾಮೇಶ್ವರನ ಕೃಪೆಯಿಂದ ವರ ಪ್ರಸಾದದಿಂದ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ ಆ ಮಗುವಿಗೆ ಕುಮಾರರಾಮ ಎಂದು ನಾಮಕರಣ ಮಾಡಲಾಯಿತು. ಹೀಗೆ ಶಿಷ್ಟಸಾಹಿತ್ಯದಲ್ಲಿ ಕುಮಾರ ರಾಮನ ಜನನದ ಬಗ್ಗೆ ಇರುವ ಮಾಹಿತಿ.

ಶಿಷ್ಟಸಾಹಿತ್ಯಕ್ಕಿಂತ ಜನಪದ ಸಾಹಿತ್ಯದಲ್ಲಿ ಕುಮಾರರಾಮನನ್ನು ಭಿನ್ನ ದೃಷ್ಟಿಯಿಂದ ನೋಡಲಾಗಿದೆ. ಡಾ ॥ ಕೆ.ಎಂ ಮೈತ್ರಿ ಸಂಪಾದಿಸಿರುವ ಕುಮಾರರಾಮ ಮತ್ತು ಕೃಷ್ಣ ಗೊಲ್ಲರ ಕಾವ್ಯದಲ್ಲಿ ಕುಮಾರರಾಮನ ಜನನದ ಬಗ್ಗೆ ಹೀಗೆ ಹೇಳಲಾಗಿದೆ. ಕಂಪಿಲ ಮತ್ತು ಹರಿಯಾಲ ದೇವಿಗೆ ಬಹಳ ದಿನಗಳವರೆಗೆ ಮಕ್ಕಳಾಗದಿರಲು ಜಟ್ಟಂಗೇಶ್ವರನ ಜಾತ್ರೆಯಲ್ಲಿ ದೊರತ ಪ್ರಸಾದ ಬಾಳೆಹಣ್ಣಿನಿಂದ

ಹರಿಯಾಲದೇವಿಗೆ ಕುಮಾರರಾಮ ಜನಿಸುತ್ತಾನ. ಹರಿಯಾಲದೇವಿ ಹಣ್ಣನ್ನು ತಿಂದು ಸಿಪ್ಪೆಯನ್ನು ಬಿಸಾಡುವಾಗ ಕೆಳಗಿದ್ದ ದಾಸಿ ಸಿಪ್ಪೆಯನ್ನು ತೆಗೆದು ತಾನು ತಿನ್ನುತ್ತಾಳೆ. ಅವಳಿಗೆ ಒಬ್ಬ ಮಗ ಹುಟ್ಟುತ್ತಾನೆ ಅವನಿಗೆ ಓಲಿಕೆರಾಮ ಎಂದು ನಾಮಕರಣ ಮಾಡುತ್ತಾರೆ.

ಓಲಿಕೆರಾಮ ಕುಮಾರರಾಮನನ್ನು ಹೋಲುತ್ತಿರುತ್ತಾನೆ. ಇಬ್ಬರು ಪರಾಕ್ರಮದಲ್ಲಿ ಸಮಾನರು. ಶಿಷ್ಟಸಾಹಿತ್ಯದಲ್ಲಿ ಓಲಿಕೆರಾಮನ ಪ್ರಸ್ತಾಪ ಎಲ್ಲೂ ಬರುವುದಿಲ್ಲ. ಜನಪದ ಕಾವ್ಯದಲ್ಲಿ ಓಲಿಕೆರಾಮನ ಪ್ರಸ್ತಾಪ ಕಾಣುತ್ತೇವೆ. ಓಲಿಕೆರಾಮ ಕುಮಾರರಾಮನಷ್ಟು ಶೀಲವಂತನಲ್ಲ ಎನ್ನುವುದನ್ನು ಜನಪದ ಕಾವ್ಯಗಳು ಸ್ಪಷ್ಟ-ಪಡಿಸುತ್ತವೆ. ಅಪ್ರತಿಮ ವೀರನಂತೆ ಓಲಿಕೆರಾಮನು ಕುಮಾರರಾಮನನ್ನು ಹೋಲುವಂತಿದ್ದರೂ ತನ್ನಲ್ಲಿದ್ದ ಕಾಮಾಪೇಕ್ಷೆಯಿಂದ ಕಳ್ಳತನ ಮಾಡಿ ಪಾತರಗಿತ್ತಿ ಯನ್ನು ಸಮಾಧಾನ ಪಡಿಸಿ ಚಂಚಲ ಸ್ವಭಾವದವನಾಗಿ ಕಂಡಿದ್ದಾನೆ.

## ಬೊಲ್ಲ ಕುದುರೆಯ ಪ್ರಸಂಗ

"ಬೊಲ್ಲ ಕುದುರೆ' ಯ ಬಗ್ಗೆ ಶಿಷ್ಟಸಾಹಿತ್ಯದಲ್ಲಿ ಮತ್ತು ಜನಪದ ಸಾಹಿತ್ಯದಲ್ಲಿ ಬೇರೆ ಬೇರೆ ರೀತಿಯಲ್ಲಿ ಪ್ರಸ್ತಾವನೆಯಾಗಿದೆ. ಶಿಷ್ಟಸಾಹಿತ್ಯದಲ್ಲಿ ಕಂಪಿಲರಾಯನು ಕುಮಾರರಾಮನಿಗೆ "ನೀನು ಸಮರ್ಥನೇ ಆಗಿದ್ದರೆ (ಒರುಗಲ್ಲಿನ ಪ್ರತಾಪರುದ್ರನ ಮಗ) ಎಪ್ಪತ್ತು ರಾಜನ ಬೊಲ್ಲ ಕುದುರೆಯನ್ನು ಗೆದ್ದು ಬಾ"[2] ಎಂದು ಸವಾಲು ಹಾಕಿದ ಅದರಂತೆ ರಾಮನು ಯುದ್ಧದಲ್ಲಿ ಎಪ್ಪತ್ತು ರಾಯನನ್ನು ಸೆರೆಹಿಡಿದು ರಾಮನು ಬೊಲ್ಲನನ್ನು ಕೈವಶ ಮಾಡಿಕೊಂಡ ಎಂಬ ವಿಚಾರವನ್ನು ಶಿಷ್ಟಸಾಹಿತ್ಯದಲ್ಲಿ ತಿಳಿದು ಬರುತ್ತದೆ. ಜನಪದ ಸಾಹಿತ್ಯದಲ್ಲಿ ಬೊಲ್ಲಕುದುರೆಯ ಬಗ್ಗೆ ಈ ರೀತಿ ಮಾಹಿತಿ ಸಿಗುತ್ತದೆ. ಕಂಪಿಲನ ಖಡ್ಗದ ಹಾಗೆ ಕುಮಾರರಾಮನ ಕುದುರೆಯೂ ಜನಮನದ ಮೇಲೆ ಅಚ್ಚಳಿಯದ ಪರಿಣಾಮ ಬೀರಿದೆ. ಡಾ ॥ ಕೆ.ಎಂ ಮೈತ್ರಿ (ಸಂ) ಕುಮಾರರಾಮ ಮತ್ತು ಕೃಷ್ಣಗೊಲ್ಲರ ಕಾವ್ಯದಲ್ಲಿ ಕುಮಾರರಾಮನ ಜೊತೆಯಲ್ಲಿ ಬೊಲ್ಲವೆಂಬ ಕುದುರೆಯು ಜನಿಸುತ್ತದೆ. ಎಂದು ಜನಪದ ಕಾವ್ಯಗಳು ನಿರೂಪಿಸಿವೆ.

ಕುದುರೆಯು ಕಾವ್ಯದಲ್ಲಿ ಸಾಂಸ್ಕೃತಿಕ ರೂಪವನ್ನು ಹೊಂದಿರುವುದು ಕುತೂಹಲಕರ ಪ್ರಶ್ನೆಯಾಗಿದೆ. ಕಾರಣ ಚತುರ್ಬಲಗಳಲ್ಲಿ ಅಶ್ವಬಲವು ಪ್ರಮುಖವಾಗಿದೆ. ಇಂದಿಗೂ ಈ ಸಂಪ್ರದಾಯವನ್ನು ಕಾಣಬಹುದು.

ಬಹುಶಃ ಮುಸಲ್ಮಾನರ ದಂಡಿನಲ್ಲಿದ್ದ ನೀಳ ಕಾಯದ ಬಲಿಷ್ಟ ಕುದುರೆಗಳಿಂದ ಕನ್ನಡಿಗರು ರೋಮಾಂಚಿತರಾದಂತಿದೆ. ನಂಜುಂಡ ಕವಿಯಂತೂ ಕುದುರೆಯನ್ನು ವರ್ಣಿಸಿರುವ ರೀತಿ ಮನೋಜ್ಞವಾಗಿದೆ.

"ಸುಳಿಗಾಳಿಯಂತೆ ಸುಟ್ಟರೆಯಂತೆ ಜಂಜಾ

ನಿಲದಂತೆ ಬಿರುಗಾಳಿಯಂತೆ

ಸುಳಿದು ತಿರುಗಿ ಪರಿದಲೆದು ರಾಮನವಾಜಿ

ಕೊಳು ಕುಳದೊಳು ತಿರುಗುತಿದೆ"

ಕುದುರೆಯು ಓಡುವ ವೇಗವನ್ನು ಬಿರುಗಾಳಿಗೆ ಹೋಲಿಸಿದ್ದಾರೆ.

ಅದಕ್ಕಾಗಿಯೇ ಹೋರಾಟದ ಕುದುರೆಗಳನ್ನು ತಡೆಯಲು (ಕುದುರೆ ಕಲ್ಲುಗಳನ್ನು ನೆಡುವ ಪದ್ಧತಿಯನ್ನು ಕಾವ್ಯದಲ್ಲಿ ಕಾಣಬಹುದು. "ಸಮುದ್ರಮಟ್ಟದಿಂದ 696 ಮೀ ಎತ್ತರದಲ್ಲಿರುವ ಕಮ್ಮಟವನ್ನು ಏರಲು ಕುದುರೆಗಳಿಂದ ಮಾತ್ರ ಸಾಧ್ಯ. ಸಗರನಾಡಿನ ಪ್ರಭುಗಳ ಸಹಾಯದಿಂದ ಕಂಪಿಲ 'ಖಡ್ಗ' ಧರಿಸಿದ ಹಾಗೆ ಕುಮಾರರಾಮ ಕುದುರೆ ವಿದ್ಯೆಯನ್ನು ವಿಶೇಷವಾಗಿ ಕಲಿತಿರಬೇಕು. ಕಮ್ಮಟದ ಪತನ ಮತ್ತು ರಕ್ಷಣೆಯಲ್ಲಿ ಕುದುರೆಗಳು ನಿರ್ವಹಿಸಿದ ಪಾತ್ರವೇ ಆನಂತರದ ಕಾಲಘಟ್ಟದಲ್ಲಿ ಆವುಗಳ ಬಗೆ ಬಗೆಯ ರಚನೆಗಳಿಗೆ ಕಾರಣವಾಗಿರ ಬೇಕು ಎನ್ನಬಹುದು".[3]

## ರತ್ನಾಜಿಯ ಮುದುವೆ

ಚೆನ್ನಾಗಿ ಭೈರವಲಿಂಗನ ಪೂಜೆಯ

ಅನುವಾಗಿ ಪ್ರಜೆಯೆಲ್ಲ ನೆರೆದು ।

ಬೆನ್ನ ಸಿಡಿಯು ಬಾಯಿಬೀಗವು ಮೊದಲಾದ

ಉನ್ನಂತ ಅಗ್ನಿಕೊಂಡಗಳ ॥48॥

ಬಡಿವ ಡೊಳ್ಳಿನ ರವ ಗಿಡಿಬಿಡಿ ಡಮಾಮಿ

ದೃಢವುಳ್ಳ ವಗ್ಗರುಗ್ಗಡೆಸೆ ।
ಹೊಡೆವ ವಾದ್ಯದ ರಭಸವ ಕೇಳಿ ಕಂಪಿಲ
ಸಡಗರವೆಲ್ಲಿಯದೆಂದ ॥49॥

ದೊರೆ ರಾಯ ಕೇಳಯ್ಯ ರಡ್ಡೇರ ಪರುವನು
ಭೋರಿಟ್ಟು ವಾದ್ಯ ಭೈರವಗೆ ।
ಹರಕೆಯ ಪೂಜೆಯ ಒಪ್ಪಿಸುತಿಹರೆಂದು
ಅರಿಕೆಯ ಮಾಡೆ ಕಂಪಿಲಗೆ ॥50॥

ಅಂದು ಕಂಪಿಲರಾಯ ಭೈರವಲಿಂಗನ
ಒಂದು ನೋಡಲಿಬೇಕುಯೆನುತ ।
ಬಂದು ಶರಣುಮಾಡಿ ನಿಂದನು ಧರಣೀಶ
ಚೆಂದಚೆಂದದಿ ಕರ ಮುಗಿ ॥51॥



ಸಿಡಿಯನಾಡುವುದನು ನೋಡಿ ಕಂಪಿಲರಾಯ
ಕಡು ಚೆಲುವೆ ರತ್ನಿಯ ಕಂಡ ।
ನೋಡಿ ಕಂಪಿಲರಾಯ ದೃಷ್ಟಿಯನಿಟ್ಟನು
ರೂಢಿಗೆ ಆಶ್ಚರ್ಯವೆಂದು ॥52॥

ಆಟವ ನೋಡುತ ಕೋಟಲೆಗೊಳಗಾದ
ಮೀಟು ಜವ್ವನೆ ಹೆಣ್ಣ ಕಂಡ ।
ಇಟ್ಟನು ಮನವ ರತ್ನಿಯ ಮೇಲೆ ಕಂಪಿಲ
ಊಟಕೆ ಕರೆ ಬಂದರವರು ॥53॥

ಕರೆದರೆ ಅಮೃತಾನ್ನವನುಂಡು ಕಂಪಿಲ

ಒರೆದು ಕೇಳಿದನವರುಗಳ।

ವನಿತೆಯ ಎನಗೀಯ[ಬೇಕೆಂದು] ಕಂಪಿಲ

ಕರೆದು ಕೇಳಿದನವರೊಡನೆ ॥ 54॥

ಹೊಸಕುಮಾರರಾಮನ ಸಾಂಗತ್ಯ (ಪು 24)

"ಬೇಟೆಗೆ ಹೋದ ಕಂಪಿಲದೇವರಾಯನು ಕಂಪಿಲ ಸೋಮೇಶ್ವರ ದೇವತೆಯನ್ನು ಕಂಡು ವರವನ್ನು ಪಡೆದು ಮರಳುತ್ತ ಮಕ್ಕುಂದಿ ಸಾಲ್ಗುಂದಿಗೆ ಬಂದನು. ಅಲ್ಲಿ ಬೆನ್ನ ಸಿಡಿ ಬಾಯಬೀಗ ಅಗ್ನಿಕುಂಡ ವಗ್ಗಯ್ಯಗಳ ಉಗ್ಗಡಣೆಗಳಿಂದ ರೆಡ್ಡಿಗಳು ಬೈರವನ ಪರ್ವ ಆಚರಿಸುತ್ತಲಿದ್ದರು. ಈ ಪರ್ವ ನೋಡಲು ಬಂದ ರೆಡ್ಡಿ ಕುಲದ ರತ್ನಾಜಿಯನ್ನು ನೋಡಿ ಅರಸು ಮೆಚ್ಚಿದ. ಸಂಬಂಧಿಕರಿಗೆ ಎರಡು ಗ್ರಾಮಗಳನ್ನು ಕೊಟ್ಟು ಅವಳನ್ನು ಕರೆದು ಕೊಂಡು ಬಂದ ಯಲುಮಾರನ ಮಗಳನ್ನು (ರತ್ನಾಜಿ) ಕಂಡು ಎಲ್ಲ ಸವತಿಯರು ತಳಮಳಗೊಂಡರು ಎಂಬ ವಿಚಾರ ಇದೆ"।

ಜಾನಪದ ಕಾವ್ಯಗಳಲ್ಲಿ ರತ್ನಾಜಿಯು ಚಾವುಲ ರಾಜನ ಮಗಳು ಅವಳು ವಿದ್ಯಾವಂತೆ ಇಂಗ್ಲೀಷ್, ಮರಾಠಿ, ಹಿಂದಿ ಭಾಷೆಗಳನ್ನು ಕಲಿತವಳು. ಅವಳಿಗೆ 60 ಗಂಡುಗಳ ಪೋಟೋಗಳನ್ನು ತೋರಿಸಿದರೂ ಯಾರನ್ನು ಒಪ್ಪದೇ ಮದುವೆಯನ್ನು ನಿರಾಕರಿಸುತ್ತಿದ್ದಳು.

ಕುಮಾರರಾಮನ ಮಾವ ಬೈಚಣ್ಣ ರಾಮನಿಗೆ ಮದುವೆ ಮಾಡಲು ಮುಂದಾಗಿ ರಾಮನ ಭಾವಚಿತ್ರವನ್ನು ತೆಗೆಸಿ ಅದನ್ನು ತಗೆದು ಕೊಂಡು ಹಲವಾರು ಕಡೆ ಕನ್ಯೆಯನ್ನು ಹುಡುಕಲು ಪ್ರಯತ್ನಿಸುತ್ತಾನೆ. ಕೊನೆಗೆ ಚಾವುಲ ರಾಜನ ಬಳಿಬಂದು ರಾಮನ ಭಾವ ಚಿತ್ರ ತೋರಿಸಲು 'ನನ್ನ ಮಗಳು ಬಹಳ ಓದಿ ಕೊಂಡಿದ್ದಾಳೆ, ಅವಳು ಭಾವ ಚಿತ್ರ ನೋಡಿ ಒಪ್ಪಿಕೊಳ್ಳ ಬೇಕಲ್ಲಾ' ಎಂದು ರಾಮನ ಭಾವ ಚಿತ್ರ ತೆಗೆದುಕೊಂಡು ಹೋಗಿ ರತ್ನಾಜಿಯ ಮುಂದೆ ತೋರಿಸಲು ರಾಮ ಅಂತ ಬಾರ್ಲಾ ಬಿದ್ದು ಬಿಟ್ಲು ರಾಮನ ಭಾವ ಚಿತ್ರವನ್ನು ಒಪ್ಪಿಕೊಂಡು ಒಪ್ಪಿಗೆಯನ್ನು ಕೊಡುತ್ತಾಳೆ.

ರಾಮ ಜೀವಕ್ಕೆ ಯಾವಾಗ ಕಾಯಬೇಕು.

ನಿನ್ನ ಕೂಟ ಯಾಗ ಮಾತಾಡ್ಬೇಕು.

ಡಾ.ಕೆ.ಎಂ.ಮೈತ್ರಿ (ಸಂ) ಕುಮಾರರಾಮ ಕೃಷ್ಣಗೊಲ್ಲರ ಕಾವ್ಯ (ಪು117) ಎಂದು ರಾಮನನ್ನೆ ಮನಸ್ಸಿನಲ್ಲಿ ತುಂಬಿಕೊಂಡು ತನ್ನದೊಂದು ಭಾವಚಿತ್ರ ರಾಮನಿಗೆ ತೋರಿಸಲು ಕೊಡುತ್ತಾಳೆ. ರತ್ನಾಜಿಯ ಪೋಟೋವನ್ನು ನೋಡಿದ ಕಂಪಿಲರಾಯ ರತ್ನಾಜಿಯ ಭಾವ ಚಿತ್ರಕ್ಕೆ ಬೊಚ್ಚು ಬಾಯಿಂದ ಮುತ್ತು ಕೊಟ್ಟು ಎಲ್ಲಿಂದ ತಂದೆ ಬಚ್ಚಣ್ಣ ಈ ಸುಂದರಿಯನ್ನು ಏಂದು ಲೊಚ ಲೊಚ ಮುತ್ತು ಕೊಟ್ಟ.

ಚಿಕ್ಕೇಣ್ತಿ ಅಂತ ಬಾರ್ಲ ಬಿದ್ದ ಬಿಟ್ಟ

ಪೋಟೋ ಮ್ಯಾಲೆ

ಚಂಪೆ ಚಂಪೆ ಮುದ್ದು ಕೊಡ್ತಾನೆ

ಯಪ್ಪಾ ಭಾವ ಮೈದ ಆ ಕಾಲಕ್ಕೆ ನಿಮ್ಮ

ಅಕ್ಕನ ಕೊಟ್ಟೆ ಈ ಕಾಲಕ್ಕೆ ಈ ರತ್ನಾಕ್ಷಿಯ ನನಗೇ ಮಾಡ್ಬೇಕು

ನನ್ನ ಜೀವ ನಿಂದ್ರದಿಲ್ಲಂತ

ಚಂಪಿ ಚಂಪಿ ಮುದ್ದು ಕೊಟ್ಟ.

ಡಾ||.ಕೆ.ಎಂ ಮೈತ್ರಿ (ಸಂ) ಕುಮಾರರಾಮನ ಮಹಾಕಾವ್ಯ (ಪು 119)

ಬಚ್ಚಣ್ಣನನ್ನು ವಿಧವಿಧವಾಗಿ ಬೇಡಿಕೊಂಡು ರತ್ನಾಜಿಯನ್ನು ಕಂಪಿಲನಿಗೆ ಮದುವೆ ಮಾಡಿ ಕೊಡಲು ಒಪ್ಪಿಸಿದ, ರಾಮನನ್ನು ಬಚ್ಚಿಟ್ಟು ರತ್ನಾಜಿಯ ಮದುವೆಯನ್ನು ಏರ್ಪಡಿಸುತ್ತಾರೆ.

ಕಂಪಿಲರಾಮನು ಕಂಬ್ಳಿ ಮ್ಯಾಲೆ ಕಂಬ್ಳಿ ಮೂರು ಕಂಬ್ಳಿಗಳನ್ನು ಹೊದ್ದು ಗಂಧ ಹಂಚ್ಚಿ ಹೂವ ಹಾಕಿ ಮದುವೆ ಮುಗಿಸುತ್ತಾರೆ. ಕೊನೆಗೆ ಕಂಬಳಿ ತೆಗೆದು ನೋಡಿದರೆ ಹಲ್ಲಿಲ್ಲದ ಮುದುಕ ರತ್ನಾಜಿಯ ಅಪ್ಪ ಅಮ್ಮ 60 ಜನರ ಪೋಟೋ ತೋರಿಸಿದರು ಒಪ್ಪಿಕೊಳ್ಳಲಿಲ್ಲ. ಮುದುಕ ನಿನ್ನ ಹಣೆ ಬರದಾಗೆ ಬರೆದಿದ್ದಾನೆ. ನಾವು ಹೆಂಗ ನೋಡ್ಲಿ ಮಗಳ ಮುಖನ ಎಂದು ಅಳುತ್ತಿದ್ದರು. ಜನಪದರಲ್ಲಿ ಹೀಗೆ ಮೋಸ ಮಾಡಿ ಮದುವೆ ಆಗುವುದು ತಪ್ಪೇಂದು ಅನ್ನಿಸುವುದಿಲ್ಲ.

ಈಗ ಕಂಬ್ಳಿಮ್ಯಾಲೆ ಕಂಬ್ಳಿ ಮೂರು ಕಂಬ್ಳಿ ಹೊದ್ಸಿ

ಆಗ ಅಗಲೆ ಕಣ್ಣು ತೆರೆದು ತಾಳಿ ಕಟ್ಟಿಸಿದ್ರು

ಅಮ್ಮ ರತ್ನಾಕ್ಷಿ

ಈಗ ತಾಳಿಯಿಂದ ಮಗಳು ಕೊಟ್ಟಿದ ಮ್ಯಾಲೆ

ಅಳಿಯಲ್ಲ ಮಗಳಿದ್ದಂಗ ನಾನು ಕೈಯತ್ತಿ ಬದೇ ಬಾರ್ಲ್ಲು.

ಡಾ॥ ಕೆ.ಎಂ ಮೈತ್ರಿ (ಸಂ) ಕುಮಾರರಾಮ ಕೃಷ್ಣಗೊಲ್ಲರ ಕಾ ಪುಟ 123

ಹೀಗೆ ಶಿಷ್ಟಸಾಹಿತ್ಯದಲ್ಲಿ ಇಲ್ಲದೆ ಇರುವ ಸಂಗತಿ ಜನಪದರು ಸೃಶ್ಟಿಸಿದ್ದಾರೆ. ಜನಪದರಲ್ಲಿ ಇರುವ ನಂಬಿಕೆ ತಂದೆ ಇಷ್ಟಪಟ್ಟದ್ದನ್ನು ಮಕ್ಕಳು ನೇರವೇರಿಸುವುದು. ರಾಮನಿಗೆ ಈ ವಿಷಯ ತಿಳಿದು ನಾನು ಅಪ್ಪನ ಮಗ ಅಪ್ಪನ ಇಷ್ಟಾನೆ ನನ್ನ ಇಷ್ಟ ಎಂದು ಒಪ್ಪಿಕೊಳ್ಳುವ ದೊಡ್ಡಗುಣ ಮುದುವೆಯಲ್ಲಿ ಕಾಣಿಸಿಕೊಳ್ಳದೆ ನೆಲಮಾಳಿಗೆಯಲ್ಲಿದ್ದ ರಾಮ ಮದುವೆಯ ನಂತರ ಹೊರ ಬರುತ್ತಾನೆ. ಅಂದಿನಿಂದ ರಾಮನನ್ನು ಕಾಣಬೇಕೆಂಬ ತವಕದಲ್ಲಿರುವ ರತ್ನಾಜಿ ತನ್ನ ಮನಸ್ಸಿನಲ್ಲಿ ತಾಳಿಕಟ್ಟಿದರೇನು ನನ್ನ ದೇಹಕ್ಕೆ ಮನಸ್ಸಿಗೆ ರಾಮನೇ ಗಂಡ ಎಂದು ತೀರ್ಮಾನಿಸುತ್ತಾಳೆ. ಕಂಬಳಿ ಹೊದ್ದು ಮದುವೆಯಾಗುವ ಸಂಗತಿ ಶಿಷ್ಟಸಾಹಿತ್ಯದಲ್ಲಿ ಪ್ರಸ್ತಾಪವಾಗಿಲ್ಲ.

## ಪಾತರಗಿತ್ತಿಯ ಸನ್ನಿವೇಶ

ಜನಪದರು ಓಲಿಕೆ ರಾಮನನ್ನು ಕುಮಾರರಾಮನಷ್ಟೇ ಸಮರ್ಥ ಎಂದು ಕಾವ್ಯದಲ್ಲಿ ಬಿಂಬಿಸಿದ್ದಾರೆ. ಕುಮಾರ ರಾಮನನ್ನು ಹೋಲುವಂತೆಯೇ ಇರುತ್ತಾನೆ. ಇವನು ದಾಸಿಯ ಮಗನಾಗಿದ್ದರೂ ಪರಾಕ್ರಮದಲ್ಲಿ ರಾಮನಷ್ಟೆ ಚಾಣಾಕ್ಷ ಎಂಬುದಕ್ಕೆ ರಾಮನೊಂದಿಗೆ ಮಾಡಿದ ಯುದ್ಧಗಳು ಸಾಕ್ಷಿಯಾಗಿವೆ. ರಾಮ ಪರದಾರ ಸೋದರನಂತೆ ಬಿಂಬಿತವಾಗಿದ್ದರೆ ಓಲಿಕೆರಾಮ ಚಂಚಲ ಸ್ವಭಾವದವನಾಗಿದ್ದಾನೆ. ಕುಮಾರ ರಾಮ ಮತ್ತು ಓಲಿಕೆರಾಮ ತನ್ನ ಮಾವ ಬಚ್ಚಣ್ಣ ನೊಂದಿಗೆ ಬರುತ್ತಿರುವಾಗ ಮಹಡಿ ಮೇಲಿದ್ದ ಪಾತರಗಿತ್ತಿಯನ್ನು ನೋಡಿ ಮನ ಸೋತು ರಾತ್ರಿ ನಿದ್ದೆಬರದೆ ಕದ್ದು ಮನೆಯಿಂದ ಹೋಗಿ ಪಾತರಗಿತ್ತಿಯನ್ನು ಸೇರುತ್ತಾನೆ. ಪಾತರಗಿತ್ತಿಯ ಸಹವಾಸದಿಂದ

ಅವಳ ಆಸೆಗಳನ್ನು ನೇರವೇರಿಸಲು ಕಳ್ಳತನ ಮಾಡಿ ಬೇಡಿ ಹಾಕಿಸಿಕೊಂಡು ಜೈಲಿಗೆ ಸೇರುತ್ತಾನೆ.

ಕುಮಾರ ದ್ವಯರಲ್ಲಿ ಸೋದರ ಭಾವನೆಯ ಅಪೂರ್ವತೆ ವ್ಯಕ್ತವಾಗಿದೆ. ಓಲಿಕೆರಾಮನು ಪಾತರಗಿತ್ತಿಯ ಸಹವಾಸದಿಂದ ಸೆರೆಮನೆಯಲ್ಲಿರ ಬೇಕಾದ ಸಂದರ್ಭದಲ್ಲಿ ಕುಮಾರರಾಮನ ದುಃಖ ಮನ ಕಲಕುವಂತೆ ವ್ಯಕ್ತವಾಗಿದೆ.

ತಮ್ಮ ನನ್ನ ಎಡಗೈ ಲೋಕದವ್ನೆ ತಮ್ಮಾ

ತಮ್ಮ ಒಂದ ಮಾತನ್ನು ಹೇಳಿಲ್ಲ ತಮ್ಮಾ

ತಮ್ಮಾ ಒಂದು ಮಾತನ್ನು ಹೇಳಿಲ್ಲಪ್ಪ ॥ ತಂದನ ॥

ಡಾ ॥ ಕೆ.ಎಂ ಮೈತ್ರಿ (ಸಂ) ಕುಮಾರ ರಾಮ ಮತ್ತು ಕೃಷ್ಣಗೊಲ್ಲರ ಮಹಾ ಕಾವ್ಯ (ಪು 41).

## ಶೂಲದ ಹಬ್ಬ ಆಚರಣೆ

ರಾಮನ ಕನಸಿನಲ್ಲಿ ಗುಂಡ ಬ್ರಹ್ಮಯ್ಯ ಕಾಣಿಸಿಕೊಂಡು 'ಶೂಲದ ಮಹಾತ್ಮೆ' ವಿವರಿಸಿದ, ಇದರಿಂದ ಪ್ರಭಾವಿತನಾದ ರಾಮ ತಂದೆಯ ಬಳಿಗೆ ಬಂದು, ಶೂಲದ ಹಬ್ಬ ಆಚರಿಸುವುದಾಗಿ ತಿಳಿಸಿದ. ಊರಿನ ಮಾನ್ಯರು ತಮ್ಮ ತಮ್ಮ ಶೂಲಗಳನ್ನು ಅಲಂಕರಿಸಿದರು. ಕಂಪಿಲರಾಯ, ಬೈಚಪ್ಪ ಹಬ್ಬ ನೋಡಲು ಬಂದರು. ರತ್ನಾಜಿಯೂ ಸಿಂಗರಿಸಿಕೊಂಡು ಸೇವಕಿಯರೊಡನೆ ಬಂದು ಶೂಲದ ಮೆರವಣಿಗೆ ನೋಡಿದಳು.

ಕಾಟಣ್ಣ ದೇವಿಶೆಟ್ಟಿಯ ಲಿಂಗ ಭಾವಸಂಗಮ ಕೊಂಡಿಯರಾಜ ಭೈರವ ತಳವಾರ ನರಸಯ್ಯನ ಮಗ ಸಿಂಗ ಇನ್ನು ಮುಂತಾದವರ ಶೂಲಗಳನ್ನು ಒಂದೊಂದಾಗಿ ನಾಗಿ ತೋರಿಸಿದಳು. ಮುಂದುವರಿದು ರಾಮನ ವಿವರ ಕೇಳುತ್ತಲೆ ಅವನ ರೂಪಕ್ಕೆ ರತ್ನಾಜಿ ಸೋತು ಹೋದಳು ಶೂಲದ ಮೆರವಣಿಗೆ ಮುಗಿಯುತ್ತಲೇ ರತ್ನಾಜಿ ಅರಮನೆಗೆ ಹೋಗಿ ವಿರಹದಲ್ಲಿ ಕುದಿಯುತ್ತಾಳೆ ಎಂಬ ವಿವರ ಶಿಷ್ಟ ಸಾಹಿತ್ಯದಲ್ಲಿ ಕಾಣತ್ತೇವೆ.

ಜನಪದ ಸಾಹಿತ್ಯದಲ್ಲಿ ಶೂಲದ ಹಬ್ಬದ ವಿವರ ದೊರೆಯುವುದಿಲ್ಲ ಕುಮಾರರಾಮನನ್ನು ರತ್ನಾಜಿಯು ಭಾವಚಿತ್ರವನ್ನು ನೋಡಿದ ಕ್ಷಣದಿಂದಲೇ ಕುಮಾರರಾಮನ ಮೇಲೆ ಮೋಹಗೊಳ್ಳುತ್ತಾಳೆ ಎಂಬ ವಿಚಾರ ಜನಪದ ಸಾಹಿತ್ಯದಲ್ಲಿ ದೊರೆಯುತ್ತದೆ.

ರಾಮನು ಬೇಟೆಗೆ ಹೋದ ಸಂದರ್ಭದಲ್ಲಿ ಮೊಲವನ್ನು ಬೆನ್ನಟ್ಟಿದ, ಮೊಲವು ಓಡುತ್ತ ಕಮ್ಮಟಕ್ಕೆ ಬಂದಾಗ ಆ ಕಮ್ಮಟವನ್ನು ನೋಡಿ ಬೆರಗಾದ. ಅದು ಜೈನರ ನೆಲೆಯಾಗಿತ್ತು. ಜೈನರು ಸಿದ್ದಪಡಿಸಿದ್ದ ಅಡಿಗೆಯನ್ನು ಊಟಮಾಡಿ ಮರಳಿದಾಗ ರಾಮ ಕುಳಿತು ಊಟ ಮಾಡಿದ ಜಾಗವನ್ನು ತೊಳೆದು ಶುದ್ಧ ಮಾಡಿದ ವಿಷಯ ತಿಳಿದು ಬರುತ್ತವೆ. ಕುಮಾರರಾಮ ಕೋಪಗೊಂಡು ಬಸದಿಯಲ್ಲೆ ಕುರಿಕೋಣ ಕೊಯಿಸಿದ ಇದನ್ನು ಕಂಡ ಜೈನರು ಆ ಸ್ಥಳವನ್ನು ಬಿಟ್ಟು ಕೊಪ್ಪಳಕ್ಕೆ ವಲಸೆ ಬಂದರು. ಈ ವಿಚಾರವನ್ನು ಗಮನಿಸಿದಾಗ ಜಾತೀಯತೆ, ಅಸ್ಪೃಶ್ಯತೆಗಳನ್ನು ಕುಮಾರರಾಮ ಸಹಿಸುತ್ತಿರಲಿಲ್ಲ ಎಂಬ ವಿಚಾರ ಸ್ಪಷ್ಟವಾಗುತ್ತದೆ. ಅಲ್ಲಿಂದ ಕಮ್ಮಟವನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡ ಎಂಬುದನ್ನು ಶಿಷ್ಟ ಸಾಹಿತ್ಯ ತಿಳಿಸುತ್ತದೆ.

## ಕುಮಾರರಾಮನ ಮಡದಿಯರು ಮಾಸ್ತಿಯಾಗುವ ಸನ್ನಿವೇಶ

ಜನಪದ ಸಾಹಿತ್ಯದಲ್ಲಿಲ್ಲದ ಒಂದು ವಿಚಾರವನ್ನು ಶಿಷ್ಟ ಸಾಹಿತ್ಯದಲ್ಲಿ ರಚನೆಯಾಗಿರುವುದನ್ನು ಗುರುತಿಸಲಾಗಿದೆ. ರತ್ನಾಜಿಯನ್ನು ರಾಮನು ಅತ್ಯಾಚಾರ ಮಾಡಿದ್ದಾನೆಂದು ತಿಳಿದ ಕಂಪಿಲನು ರಾಮನನ್ನು ಕೊಲ್ಲಲು ಆದೇಶಿಸುತ್ತಾನೆ. ಬೈಚಪ್ಪ ರಾಮನನ್ನು ಮತ್ತು ರಾಮನ ಐದು ಜನ ಗೆಳೆಯರನ್ನು ನೆಲಮಾಳಿಗೆಯಲ್ಲಿಟ್ಟು ರಾಮನನ್ನೆ ಹೋಲುತ್ತಿದ್ದ ಖಳರಾಮನ ಶಿರಸ್ಸನ್ನು ಕತ್ತರಿಸಿ ಕಂಪಿಲನಿಗ ರತ್ನಾಜಿಗೆ ತೋರಿಸಿದ, ರತ್ನಾಜಿಗೆ ಸಂತೋಷವಾಯಿತು. "ಹರಿಯಾಲದೇವಿ ದುಃಖ ಗೊಂಡಳು. ರಾಮನ ರಾಣಿಯರು ದುಃಸ್ವಪ್ನ ಕಂಡು ಅಳುತ್ತ ಮಾವನ ಹತಿರ ಹೋಗಿ 'ಮಾಸ್ತಿ' ಯಾಗುವುದಕ್ಕೆ ಅಪ್ಪಣೆ ಕೇಳಿದರು. ಅಂದರೆ ರಾಮನಿಗೆ ಐದು ಜನ ರಾಣಿಯರು ಇದ್ದರು. ಎಂದು ತಿಳಿದು ಬರುತ್ತದೆ"[5] ಜನಪದ ಸಾಹಿತ್ಯದಲ್ಲಿ ಎಲ್ಲಿಯೂ ರಾಮನ ಮಡದಿಯರ ಬಗ್ಗೆ ಪ್ರಸ್ತಾಪವಾಗಿಲ್ಲ. ಈ ಬದಲಾವಣೆಯನ್ನು ಶಿಷ್ಟಸಾಹಿತ್ಯ ಮತ್ತು ಜನಪದ ಸಾಹಿತ್ಯದಲ್ಲಿ ಗುರುತಿಸಬಹುದು.

ಖಳರಾಮನ ಶಿರಸ್ಸನ್ನು ಕಂಡು ರಾಮನೇ ಸತ್ತಿರುವೆನೆಂದು ತಿಳಿದ ಮಡದಿಯರು ರಾಮನ ಸಮೀಪ ಬಂದು ಗಂಡನ ರೂಪ ಶೌರ್ಯ ಸದ್ಗುಣಗಳನ್ನು ಹಾಡುತ್ತ ಕುಣಿಯುತ ಬಂದರು ಇವರು ಚಿತೆಗೆ ಬೀಳದಂತೆ ಮಾಡಲು ಬೈಚಪ್ಪ ಹೀಗೆ ಹೇಳುತ್ತಾನೆ. "ನೀವು ಚಿತೆಗೆ ಬಿದ್ದರೆ ಕುಮಾರರಾಮ ಸತ್ತ ವಿಚಾರ ಸುರಿತಾಳನಿಗೆ ತಿಳಿದು ಸುರಿತಾಳ ಯುದ್ಧ ಸಾರಲು ಅನುವು ಮಾಡಿಕೊಟ್ಟಾಂತ್ತಾಗುತ್ತಾದೆ. ಅದಕ್ಕಾಗಿ ಆರು ತಿಂಗಳು ತಡೆಯ ಬೇಕೆಂದು ಬೈಚಪ್ಪ ಬುದ್ಧಿ ಹೇಳುವ ಸಂದರ್ಭವನ್ನು ಶಿಷ್ಟ ಸಾಹಿತ್ಯದಲ್ಲಿ ಕಾಣುತ್ತೇವೆ.

ಸಂಸ್ಕೃತಿಯೆನ್ನುವುದು ಸಮೂಹ ಸಮ್ಮತ ಜೀವನ ಪದ್ಧತಿಯಾಗಿದೆ, ಸಾಮಾನ್ಯವಾಗಿ ಇದು ಪ್ರತಿಕ್ರಿಯಾತ್ಮಕವಾಗಿದ್ದು, ತನ್ನ ಕಾಲದ ಆದರ್ಶ ವಾಸ್ತವಗಳ ನಿರಂತರ ಕ್ರಿಯೆಯಾಗಿದೆ ಪ್ರಾಚೀನ ಕಾಲದಲ್ಲಿ ಇದನ್ನು ರೂಪಿಸುತ್ತಿದ್ದ ಮುಖ್ಯ ಶಕ್ತಿಗಳೆಂದರೆ ಧರ್ಮ ಮತ್ತು ರಾಜಧರ್ಮ.

ಧರ್ಮಕ್ಕೆ ಸಂಬಂಧ ಪಟ್ಟಂತೆ ಹೇಳುವುದಾದಾರೆ ಶಿಷ್ಟ ಮತ್ತು ಜನಪದ ಸಾಹಿತ್ಯದಲ್ಲಿ ಕಂಪಿಲ ಮತ್ತು ಕುಮಾರರಾಮ ಶೈವ ಸಂಪ್ರದಾಯಕ್ಕೆ ಸೇರಿದವರೆಂದು ತಿಳಿಯುತ್ತದೆ. ಮುಮ್ಮಡಿಸಿಂಗ ಕಂಪಿಲರಾಯರ ತಲೆಮಾರಿನಲ್ಲಿ ಕಂಪಿಲ ಸೋಮೇಶ್ವರ, ಕಂಪಿಲರಾಯ ಕುಮಾರರಾಯರ ಕಾಲದಲ್ಲಿ ಜಟ್ಟಂಗಿ ರಾಮೇಶ್ವರ ಈ ಮನೆತನಕ್ಕೆ ಮುಖ್ಯದೇವತೆಗಳೆನಿಸಿದ್ದರು. ಹೀಗಾಗಿ ಈ ಕಾವ್ಯದ ತುಂಬ ಹೆಚ್ಚಾಗಿ ಶಿವಭಕ್ತಿವಾತಾವರಣವೇ ತುಂಬಿದೆ. ಕಂಪಿಲ ಸೋಮೇಶ್ವರನ ಪ್ರಸಾದದಿಂದ ಕಂಪಿಲರಾಯ ಜಟ್ಟಂಗಿ ರಾಮೇಶ್ವರನ ಪ್ರಸಾದದಿಂದ ಕುಮಾರರಾಮ ಹುಟ್ಟಿದರೆಂಬುದು ಮಕ್ಕಳ ಜನನದ ಬಗೆಗೆ ಜನರಿಗಿದ್ದ ನಂಬಿಕೆಯನ್ನು ಸೂಚಿಸುತ್ತದೆ. ಓರುಗಲ್ಲಿನ ಗುಂಡ ಬ್ರಹ್ಮಯ್ಯನ ವರದಿಂದ ಯುದ್ಧ ಗೆದ್ದ ಕುಮಾರರಾಮ ಶೂಲದ ಹಬ್ಬ ಆಚರಿಸುವುದು, ಇಲ್ಲಿ ಒಂದು ಸಂಧಿಯನ್ನೇ ವ್ಯಾಪಿಸಿದೆ. ಈ ಹಬ್ಬದಲ್ಲಿ ಭಾಗಿಯಾದ ಮುಖ್ಯರು ಶೂಲ ಮೆರೆಸುವುದು ಇದರ ಲಕ್ಷಣವಾಗಿದೆ. ಕಾಕತೀಯ ಪ್ರತಾಪರುದ್ರನ ಸಂದರ್ಭದಲ್ಲಿ ನೇರವಾಗಿ ವೀರಶೈವ ವಾತಾವರಣ ಮೂಡಿ ನಿಂತಿದೆ ರೆಡ್ಡಿ ಜನ ಆಚರಿಸುತ್ತಿದ್ದ ಭೈರವನ ಪರುವದಲ್ಲಿ ಬಾಯಿಬೀಗ, ಬೆನ್ನಸಿಡಿ, ಅಗ್ನಿಕುಂಡ, ಆಚರಣೆಗಳನ್ನು ಚಿತ್ರಿಸಲಾಗಿದೆ, ಕ್ಷುದ್ರದೇವತೆಗಳಿಗೆ ಕುರಿಕೋಳಿ ಕೋಣಗಳನ್ನು ಕೊಡುವುದು ಇಲ್ಲಿ ಆನೇಕ ಬಾರಿ ಗೋಚರಿಸುತ್ತದೆ, ಇಷ್ಟಾರ್ಥ ಸಾಧನೆಗಾಗಿ ರತ್ನಾಜಿ ಹಲವು ದೈವಗಳನ್ನು ಹಲವು ಬಗೆಯಲ್ಲಿ ಬೇಡಿಕೊಳ್ಳುವುದು ಇಲ್ಲಿ ಕಂಡು ಬರುತ್ತದೆ, ರಾಮಯ್ಯ ಕುಳಿತ ಜಾಗವನ್ನು ಜೈನರು ಶುಚಿಗೊಳಿಸುವುದನ್ನು ಕೇಳಿ, ಅವರ

ಬಸದಿಗಳಲ್ಲಿ ಕುರಿ ಕೋಣ ಬಲಿಕೊಡುವುದು, ಜೈನರು ಜಿಗುಪ್ಸೆಗೊಂಡು ಹೋಗುವುದು. ಜಾತಿ ತಾರ ತಮ್ಮಕ್ಕೆ ಸಂಬಂಧಿಸಿದ ಮಹತ್ವದ ಅಂಶ ಶಿಷ್ಟಸಾಹಿತ್ಯದಲ್ಲಿ ದೊರೆಯುತ್ತದೆ.

## ಶೃಂಗಾರ ಜೀವನ

ಶಿಷ್ಟ ಮತ್ತು ಜಾನಪದ ಸಾಹಿತ್ಯದಲ್ಲಿ ಶೃಂಗಾರ ಜೀವನ ಕುರಿತು ಚಿತ್ರಿತವಾಗಿರುವುದನ್ನು ಗುರುತಿಸಬಹುದು, ಕಂಪಿಲನು ಐದು ಜನ ಹೆಂಡತಿಯರನ್ನು ಮದುವೆಯಾಗಿ ಮಕ್ಕಳು ಜನಿಸಿದ್ದರು. ಹರಿಯಾಲದೇವಿಗೆ ಮಾತ್ರ ಮಕ್ಕಳಾಗಿರಲಿಲ್ಲ, ಕಂಪಿಲನು ಭೈರವನ ಪರ್ವ ನೋಡಲು ಬಂದಾಗ ರೆಡ್ಡಿ ಕುಲದ ರತ್ನಾಜಿಯನ್ನು ಕಂಡು ಮನ ಸೋತು. ರತ್ನಾಜಿಯ ಸಂಬಂಧಿಕರಿಗೆ ಎರಡು ಗ್ರಾಮಗಳನ್ನು ದಾನ ಕೊಡುತ್ತೇನೆಂದು ಹೇಳಿ ರತ್ನಾಜಿಯನ್ನು ಕರೆತರುವುದು. ಇಳಿವಯಸ್ಸಿನ ಕಂಪಿಲನು ಹೆಣ್ಣಿಗೆ ಮನ ಸೋಲುವುದು ಸೋಜಿಗವೆನಿಸುತ್ತವೆ.

ಆಟವ ನೋಡುತ ಕೋಟಲೆ ಗೊಳಗಾದ

ಮೀಟು ಜವ್ವನೆ ಹೆಣ್ಣ ಕಂಡ !

ಇಟ್ಟನು ಮನವ ರತ್ನಿಯ ಮೇಲೆ

ಕಂಪಿಲ ಊಟಕೆ ಕರೆ ಬಂದದವರು ॥ 55 ॥

ಹೊಸಕುಮಾರಾಮ ಸಾಂಗತ್ಯ (ಸಂ) ಎಂ.ಎಂ ಕಲಬುರ್ಗಿ, ವೀರಣ್ಣ ರಾಜೂರ (ಪು23)

ಜನಪದ ಕಾವ್ಯದಲ್ಲಿ ಚಿತ್ರಿತವಾಗಿರುವ ರತ್ನಾಜಿ ಕಂಪಿಲ ರತ್ನಾಜಿಯ ಭಾವ ಚಿತ್ರ ನೋಡಿದ ಕೂಡಲೆ ಅವಳ ಸೌಂದರ್ಯಕ್ಕೆ ಮಾರು ಹೋಗಿ ಮುದಿ ವಯಸ್ಸಿನಲ್ಲಿ ಕದ್ದು ಮದುವೆಯಾಗುವುದು, ರಾಜರ ಶೃಂಗಾರ ಜೀವನನನ್ನು ತಿಳಿಸುತ್ತದೆ, ಪಾತರಗಿತ್ತಿಯ ಸ್ವಭಾವ ಓಲಿಕೆರಾಮನ ಸ್ವಭಾವವನ್ನು ಜನಪದ ಕಾವ್ಯದಲ್ಲಿ ಕಾಣಬಹುದು, ಬಾಗಿಲು ತೆಗೆ ಎಂದು ಕೇಳಿದ ಓಲಿಕೆ ರಾಮನನ್ನು ಏನು ತಂದಿದೀಯಾ ಎಂದು ಕೇಳುವ ಪಾತರಗಿತ್ತಿಯ ವೈಶ್ಯಾವೃತ್ತಿಯ ಜೀವನ ತಿಳಿಯುತ್ತದೆ, ಓಲಿಕೆರಾಮ ಎಲ್ಲರೂ ಮಲಗಿರುವಾಗ ಬಾಗಿಲು ತೆಗೆದು ಕದ್ದು ಯಾರಿಗೂ ತಿಳಿಯದ

ಹಾಗೆ ಪಾತರಗಿತ್ತಿಯನ್ನು ಸೇರುವುದು, ಸೂಳೆಗೇರಿಗಳ ವರ್ಣನೆ ಈ ಎಲ್ಲಾ ಅಂಶಗಳಿಂದ ಶೃಂಗಾರ ಜೀವನವನ್ನು ಕುಮಾರ ರಾಮನ ಚರಿತ್ರೆಯಲ್ಲಿ ತಿಳಿಯ ಬಹುದು.

ಕುಮಾರರಾಮ ಐತಿಹಾಸಿಕ ವ್ಯಕ್ತಿಯಾದರೂ ಆ ವೀರನನ್ನು ನಮ್ಮ ಜನಪದರು ವಿಭಿನ್ನ ನೆಲೆಯಲ್ಲಿ ಗುರ್ತಿಸಿದ್ದಾರೆ. ಬಹುಶಃ ವಿಜಯನಗರದ ಇತಿಹಸದಲ್ಲಿ ಕುಮಾರರಾಮನಷ್ಟು ಜನಮನದಲ್ಲಿ ಉಳಿದ ವ್ಯಕ್ತಿ ಯಾರು ಇಲ್ಲ ಎನ್ನಬಹುದು. ಬಳ್ಳಾರಿ ಜಿಲ್ಲೆಯ ಬುಡಗ ಜಂಗಾಲರು ಅಥವಾ ವೇಷಗಾರರು ತಮ್ಮ ಬುರ್ರ ಕಥಾ ಮಾದರಿಯಲ್ಲಿ ಕನ್ನಡದಲ್ಲಿ ಹಾಡಿರುವ ಈ ಕಾವ್ಯ ಅತ್ಯಂತ ವಿಶಿಷ್ಟವಾದುದು. ಜಟ್ಟಂಗೇಶ್ವರ ಸ್ವಾಮಿಯು ನೀಡುವ ಬಾಳೆಹಣ್ಣಿನ ವರಪ್ರಸಾದಕ್ಕೆ ಇಬ್ಬರು ವೀರರು ಜನಿಸುತ್ತಾರೆ. ಓಲಿಕೆರಾಮ ಸಿಪ್ಪೆ ತಿಂದ ದಾಸಿಯ ಹೊಟ್ಟೆಯಲ್ಲಿ ಹುಟ್ಟುತ್ತಾನೆ. ನಂಜುಂಡ ಕವಿಯ ರಾಮನಾಥ ಚರಿತೆಯಲ್ಲಿ ಮಾವಿನ ಹಣ್ಣು ಎಂದು ಉಲ್ಲೇಖವಾಗಿದೆ, ಆದರೆ ಹೇಳುವ ವಿಷಯ ನಿರೂಪಣೆ ಒಂದೇ ಆಗಿದೆ, ಜಟ್ಟಂಗೇಶ್ವರ ವರ ಪ್ರಸಾದ ದಿಂದಲೇ ಜನಿಸಿರುವುದು ಎಂಬುದರಲ್ಲಿ ಸಾಮ್ಯತೆಯಿದೆ.

"ವಿಜಯನಗರ ಸಾಮ್ರಾಜ್ಯದ ಹಲವು ಬುಡಕಟ್ಟುಗಳು ಕುಮಾರರಾಮನನ್ನು ತಮ್ಮ ಸಾಂಸ್ಕೃತಿಕ ವೀರನನ್ನಾಗಿ ಪರಿಗಣಿಸಿ ಅವನ ಅಣತಿಯಂತೆ ನಡೆಯುತ್ತಾರೆ. ಎಂಬುದಕ್ಕೆ ಕಮ್ಮಟ ದುರ್ಗ ಹೊಸ ಮೇಲೆದುರ್ಗ, ರಾಯಚೂರು, ಗಂಗಾವತಿ, ಪ್ರದೇಶಗಳಲ್ಲಿ ಈಗಲೂ ಉತ್ಸವ, ಆಚರಣೆಗಳು ರುಂಢಿಯಲ್ಲಿವೆ. ಎಂಬುದನ್ನು ಜನಪದ ಕಾವ್ಯಗಳು ಶಿಷ್ಟ ಕಾವ್ಯಗಳು ಉಲ್ಲೇಖಿಸಿವೆ"[5]

ಕುಮಾರ ರಾಮನ ಬೆಳವಣಿಗೆಯನ್ನು ಶಿಷ್ಟ ಮತ್ತು ಜನಪದ ಕಾವ್ಯಗಳಲ್ಲಿ ಒಂದೇ ರೀತಿ ಚಿತ್ರಿತವಾಗಿದೆ. ಕುಮಾರರಾಮ ಅಪ್ರತಿಮ ವೀರ ಎನ್ನುವುದಕ್ಕೆ ಓರಂಗಲ್ಲಿನ ಅಧಿಪತಿ ಗಣಪತಿಯ ಮಗ ಗಣ ರಾಮನನ್ನು ಸಂಹರಿಸಿ, ಗಣಪತರಾಜನನ್ನು ಸೋಲಿಸಿ, ವಜ್ರ ವೈಡೂರ್ಯ, ಮುತ್ತು ರತ್ನ ಏಳುದಡೇವು ಚಂದ್ರಾಯುದ್ಧ ಹಾಗೂ ಎರಡು ರೆಕ್ಕ ನಾಲ್ಕು ಪಾದದ ದೇವತಾ ಕುದುರೆ ಗೆದ್ದು.

ವಿಜಯ ಶಾಲಿಯಾಗಿ ಆನೆಗೊಂದಿ ಕಂಪ್ಲಿಗೆ ಮರಳುತ್ತಾನೆ, ದೇವತಾ ಕುದುರೆಗಳ ವರ್ಣನೆಯು ಜನಪದ ಕಾವ್ಯದಲ್ಲಿ ಅದ್ಭುತವಾಗಿ ವರ್ಣನೆಯಾಗಿದೆ.

ನಾಕು ಕಾಲು ಎರಡು ರೆಕ್ಕೆ
ದೇವತಾ ಕುದ್ರಿಗಳು
ಈ ಕಡ್ಲಿ ತಿಂಬಾಕ
ಸಟ್ಟ ಸರಿಹೊತ್ನ್ಯಾಗ
ಪಟಪಟ ರೆಕ್ಕೆ ಬಡಿಯೋದು
ಕೆಳಗೆ ಹಾರೋದು
ಆಗ ರೆಕ್ಕೆಲಿಂದ ಹಾಂತೆ ಬಳಕೊಂಬೋದು
ಒಂದೆಯೇಕ್ರಿ ಒಂದೊಂದು ತಿಂದ್ಹೋಗೊದು
ಗಣಪತರಾ ಮುಂಜಾ ಬಂದ
ಕುದ್ರಿಮ್ಯಾಲ ಕುತ್ಕಂಡು
ಡಾ॥ ಕೆ.ಎಂ ಮೈತ್ರಿ ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ ಪುಟ –62

ಗಣಪತಿರಾಜ ದೆಹಲಿ ನವಾಬನಿಗೆ ಕಪ್ಪ ಕಾಣಿಕೆಗಳನ್ನು ಕಳುಹಿಸುತ್ತಿರುವುದನ್ನು ತಿಳಿದ ಕುಮಾರರಾಮ ಇನ್ನುಮುಂದೆ ದೆಹಲಿ ನವಾಬನಿಗೆ ಕೊಡಬೇಕಾದ ಹಣವನ್ನು ಮತ್ತು ಕಪ್ಪ ಕಾಣಿಕೆಗಳನ್ನು ತನಗೆ ಒಪ್ಪಿಸಬೇಕು. ಎಂದು ಶರತ್ತು ಹಾಕುವ ಮೂಲಕ ದೆಲ್ಲಿ ನವಾಬನಿಗೆ ಪತ್ರವೊಂದನ್ನು ಬರೆದು ಆನೆಗುಂದಿ ಕಂಪ್ಲಿಗೆ ಯುದ್ಧಕ್ಕೆ ಬಂದ ದಿಲ್ಲಿ ನಬಾಬನನ್ನು ಯುದ್ಧದಲ್ಲಿ ಸೋಲಿಸಿ ನವಾಬರ ರಕ್ಷಣೆಗಾಗಿ ನವಾಬ ಇನ್ನು ಮುಂದೆ ಆನೆಗೊಂದಿಗೆ ಬರುವುದಲ್ಲವೆಂದು ಬೇಡಿಕೊಳ್ಳುವನು.

ಮುಂಗಲಿದೇಶದ ರಾಜನು ಸುಲ್ತಾನನಿಗೆ ಕಪ್ಪವನ್ನು ಕಳುಹಿಸುವಾಗ ಅದರೊಡನೆ ಸಿಂಗಾಡಿಯೆಂಬ ಬಿಲ್ಲನ್ನು ಕಳಿಸಿ "ಇದನ್ನು ವರಿಸಿ ಏಳು ಕೊಪ್ಪರಿಗೆಗಳನ್ನು ಭೇದಿಸಿಕೊಂಡು ಹೋಗುವ ಹಾಗೆ ಬಾಣಬಿಡುವ ಕಲಿಗಳು ನಿನ್ನ ರಾಜ್ಯದಲ್ಲಿದ್ದಾರೆಯೆ"[6] ಎಂದು ಹುರುಪಿನ ಮಾತನ್ನು ಅಟ್ಟಿದನು. ಈ ಸಾಹಸವನು ಮಾಡಲು ಅಲ್ಲಾವುದಿನನ ಕಡೆಯ ಯಾವ ವಜೀರನು ಮಲ್ಲಿಕನೂ ಸಮರ್ಥ ನಾಗಲಿಲ್ಲ, ಕೊನೆಗೆ ಬಾದುರಖಾನ ಎಂಬಾತನು ಈ ಸಾಹಸದ ಕೆಲಸವನ್ನು ಮಾಡಿ, ದೊರೆಯಿಂದ ಜಹಗೀರುಗಳನ್ನು ಪಡೆದನು ಇತರ ವಜೀರರಿಗೆ ಅಸೂಯೆಯುಂಟಾಯಿತು. ಇವನನ್ನು ಕೊಲ್ಲಲು ಯತ್ನಿಸಿದನು " ತನಗಿಂತ ಶೂರನಾದ ಮನುಷ್ಯ ತನ್ನ ರಾಜ್ಯದಲ್ಲಿರುವುದನ್ನು ದೊರೆ ಸಹಿಸುವುದಿಲ್ಲ" ಎಂಬ

ಮಾತಿನಿಂದಾಗಿ ಇವನನ್ನು ಹೆದರಿಸಿದನು ಬಾದುರಖಾನ ಪಲಾಯನ ಮಾಡಿ. ಕರ್ನಾಟಕಕ್ಕೆ ಬಂದು ಕಂಪಿಲನಿಗೆ ಶರಣಾದನು. ಇವನನ್ನು ದಂಡಿಸುವುದಕ್ಕಾಗಿಯೂ ಅಲ್ಲಾವುದೀನನು ದಂಡನ್ನು ಕಳುಹಿಸಲಾಯಿತು. ರಾಮನಾಥನ ಮೇರೆಹೊಕ್ಕೆ ಬಾದುರನನ್ನು ಹಿಂದಿಕ್ಕಿಕೊಂಡು ಸುಲ್ತಾನ ಸೈನ್ಯದೊಡನೆ ಕಾಳಗವಾಡಿ ಸೋಲಿಸಿದನು. ಇಲ್ಲಿ ನಂಜುಂಡ ಕವಿಯ ಉದ್ದೇಶ ರಾಮನಾಥನ ಶೌರ್ಯವನ್ನು ಹೊಗಳುವುದು, ಅಗಿನ ಕಾಲದ ರಾಜಕೀಯ ಸ್ಥಿತಿಯನ್ನು ತಿಳಿಸುವುದಾಗಿದೆ.

ಜನಪದ ಕಾವ್ಯಗಳಲ್ಲಿ ಅಂದಿನ ರಾಜಕೀಯ ತಿಳಿಸುವುದಕಿಂತ ಕುಮಾರರಾಮನ ಸಾಹಸ, ಶುಚಿತ್ವಗಳನ್ನು ಹೊಗಳುವುದು ಜನಪದರ ಮುಖ್ಯ ಉದ್ದೇಶವಾಗಿದೆ. ಜನಪದರಿಗೆ ಕುಮಾರರಾಮ ದೇವರಾಗಿ ಕಾಣುತ್ತಾನೆ. ಅವನ ಆದರ್ಶಗಳನ್ನು ತಮ್ಮ ಕಲ್ಪನೆಗೂ ಮೀರಿ ವರ್ಣಿಸಿ ಹಾಡಿ ಹೊಗಳಿದ್ದಾರೆ.

ಕುಮಾರರಾಮ ನೊಂದಿಗೆ ಮಾತಂಗಿ– ಕುಮಾರ ಸ್ವಾಮಿಯರ ಕಥೆಗಳೂ ಸೇರಿಕೊಂಡು ಸಂಕೀರ್ಣ ಸ್ಥಿತಿಯೊಂದು ನಿರ್ಮಾಣಗೊಂಡಿವೆ. ಕುಮಾರರಾಮನನ್ನು ಮಾತಂಗಿ ಕೊಲ್ಲುವುದನ್ನು ಎಲ್ಲ ನಿರೂಪಣೆಗಳು ಹೆಚ್ಚುಕಡೆಮೆ ಒಪ್ಪಿಕೊಂಡಿವೆ, ಮಾತಂಗಿಯನ್ನು ರತ್ನಾಜಿಯ ಅವತಾರ ಎಂದು ಕರೆಯುತ್ತಾರೆ. ಸೂಫಿ ಹೆಣ್ಣಿನಿಂದ ಕುಮಾರರಾಮ ಹತನಾಗುವ ನಿರೂಪಣೆಯೂ ಇದೆ ಬಲಶಾಲಿಯಾದ ಕುಮಾರ ರಾಮನನ್ನು ಹೆಂಗಸೊಬ್ಬಳು ಕೊಲ್ಲಲೇಬೇಕಾದ ಅನಿವಾರ್ಯತೆ ಏಕೆಂಬುದು ನಿಗೂಢವಾದ ಸಂಗತಿಯಾಗಿದೆ, ಕುಮಾರರಾಮನನ್ನು ಡಾ॥ ಚಂದ್ರಶೇಖರ ಕಂಬಾರರು ರಚಿಸಿರುವ ಜೋಕುಮಾರ ಸ್ವಾಮಿಯ ಕಥೆಯ ಪಾತ್ರದೊಂದಿಗೆ ಸಮೀಕರಿಸುವುದನ್ನು ಕಾಣಬಹುದಾಗಿವೆ.

ಜೋಕುಮಾರನನ್ನು ಮಾದಿಗರು ಕೊಲ್ಲುವುದು ಮತ್ತು ಕುಮಾರರಾಮನನ್ನು ಮಾತಂಗಿ ಕೊಲ್ಲುವುದರಲ್ಲಿ ಸಾಮ್ಯತೆ ಇದೆ. ಬಹುಶಃ ಕುಮಾರಾಮ ಪ್ರತಿನಿಧಿಸುವ ಮಾತೃ ಮೂಲ ಕುಟುಂಬ ವ್ಯವಸ್ಥೆ ಮತ್ತು ಪಿತೃ ಮೂಲ ಕುಟುಂಬ ವ್ಯವಸ್ಥೆಗಳ ನಡುವಣ. ತಿಕ್ಕಾಟ ಇದಾಗಿರಬಹುದು, ಅಲ್ಲದೆ ಆಗತಾನೇ ಪ್ರಚಾಕ್ಕೆ ಬರುತ್ತಿದ್ದ ವೈಷ್ಣವ ಧರ್ಮ ಮತ್ತು ಸೂಫಿ ನಂತರ ನಡುವಣ ಸಂಘರ್ಷವು ಇದಾಗಿರ ಬಹುದು. ಒಣ ಭೂಮಿಯನ್ನು ಹೆಚ್ಚಿಸಿದ ಕುಮಾರರಾಮನನ್ನು, ಪಾಲೋತ್ಪತ್ತಿಯ ದೈವವಾದ ಜೋಕುಮಾರ ನೊಂದಿಗೆ ಸಮೀಕರಿಸಬಹುದು ಹೀಗಾಗಿ ಕುಮಾರರಾಮ, ಮಾತಂಗಿ

ಮತ್ತು ಜೋಕುಮಾರ ಸ್ವಾಮಿಗಳ ಸಂಬಂಧವನ್ನು ಒಂದು ರೂಪಕವಾಗಿ ಗ್ರಹಿಸುವುದು ಸೂಕ್ತವಾಗಿವೆ.

ಹೀಗೆ ಸಾಹಸ ವ್ಯಕ್ತಿತ್ವದ ಕುಮಾರರಾಮನು ರಾಜಕೀಯವಾಗಿ ಪ್ರಖ್ಯಾತನಲ್ಲದಿದ್ದರೂ. ಸಾಂಸ್ಕೃತಿಕ ವ್ಯಕ್ತಿಯಾಗಿ ಜನಪ್ರಿಯನಾಗಿದ್ದಾನೆ. ಸಂಪತ್ತಿನ ಕ್ರೋಢೀಕರಣ, ಒಣಭೂಮಿಯ ಅಭಿವೃದ್ಧಿ, ಮಳೆ ನೀರಿನ ಬಳಕೆ, ಖಡ್ಗ ಮತ್ತು ಕುದುರೆಗಳ ಮೇಲೆ ಸಾಧಿಸಿದ ಹಿಡಿತ, ಶುದ್ಧ ಚಾರಿತ್ರ್ಯ, ವೈಷ್ಣವ ಧರ್ಮದ ಪ್ರಚಾರ, ಸೂಫಿಗಳಿಗೆ ನೀಡಿದ ಆಶ್ರಯ, ಮೊದಲಾದ ಕಾರಣಗಳಿಂದಾಗಿ ಪ್ರಾಸ್ತುತ ಸಮಾಜಕ್ಕೆ ಮತ್ತು ಸಂಸ್ಕೃತಿಗೆ ಹೆಚ್ಚು-ಹೆಚ್ಚು ಹತ್ತಿರವಾಗುತ್ತಾನೆ ಎನ್ನಬಹುದು.

ಜನಪದರ ಬಾಯಿಯಲ್ಲಿ ಕುಮಾರರಾಮನ ಮಹಾಕಾವ್ಯ ರೂಪಕ, ಉಪಮೆಗಳ ಮೂಲಕ ಹಾಡಿ ಹೊಗಳಿ ಕೊಂಡಾಡಿದ್ದಾರೆ. 'ಕುಮಾರ ರಾಮನ' ಕಾವ್ಯದಲ್ಲಿ ಕುಮಾರರಾಮನ ತಾಯಿ ಹರಿಯಾಳದೇವಿ ಜಟ್ಟಿಂಗೇಶ್ವರ ಸ್ವಾಮಿಯಿಂದ ಪಡೆದು ಕೊಂಡ ಒಂದು ಬಾಳೆಹಣ್ಣಿಗೆ ಎರಡು ಮಕ್ಕಳು ಜನಿಸುತ್ತಾರೆ. ಹಣ್ಣು ತಂದ ರಾಣಿ ಹರಿಯಾಳ ದೇವಿಯ ಹೊಟ್ಟೆಯಲ್ಲಿ ಕುಮಾರರಾಮ ಹುಟ್ಟಿದರೆ. ಸಿಪ್ಪೆ ತಿಂದ ದಾಸಿಯ ಹೊಟ್ಟೆಯಲ್ಲಿ ಓಲಿಕೆ ಜನಿಸುತ್ತಾನೆ. ಇದು ಕಾವ್ಯದ ಒಂದು ಔಚಿತ್ಯವೇ

"ಬಾಳೆಹಣ್ಣು ನೋಡಣ್ಣಾ ಗಗನಕ್ಕೆ ಹಾರ್ಯೆತೊ

ತೋಥಡಿ ಬಾಳೆಹಣ್ಣು ನೋಡಣ್ಣಾ ಬೊಗಸ್ಯಾಗ ಬಿದ್ದೈತೋ

ಏಕೊಟ್ಟಿನ್ಹೋಗೋ ಲೋಕಕ್ಕೆ ನಿನ್ನ ಆನೆಗೊಂದಿ ಕಂಪಿಲಿ

ಡಾ ॥ ಕೆ.ಎಂ ಮೈತ್ರಿ ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ ಪುಟ – 2

ಕಾವ್ಯದಲ್ಲಿ ಗುರು ಕುಲದ ವಿದ್ಯಾಭ್ಯಾಸದ ವರ್ಣನೆಯನ್ನು ಇಲ್ಲಿ ಕಾಣುವುದರ ಜೊತೆಗೆ ಮರಳಿನ ಮೇಲೆ ಬರೆಯುವುದನ್ನು ಕಾಣ ಬಹುದಾಗಿವೆ.

"ನಾಲ್ಕು ಬುಟ್ಟಿ ಆಗ ಮಣ್ಣು ತಂದಾಕಿ

ಈಗ ಪೂಜೆ ಮಾಡಿ ಕೈ ಮುಗಿದು

ಬಲಗೈ ಬೊಳಿಟ್ಟಾ ಇನ್ನು ಮಗ ಬರಿತಾನ

ಏ ಸರಸ್ವತಿ ಬರುದನಾ ಓ ನಾಮ ಬರುದಾನಾ

ಕಾಗುಣಿತ ಬರುದಾನ

ತೋಥಡಿ ಬೊಳ್ಳು ತೋರ್ಸಿದರ ಮಗನಮ್ಮ ಬೊಳ್ಳು ನುಂಗಿ ಬಿಡತನಾ"

ಆನೆಗೊಂದಿ ಕಂಪಿಲಿ ಪಟ್ಟಣದಲ್ಲಿ ಕುಮಾರರಾಮ ಮತ್ತು ಓಲಿಕೆ ರಾಮ ಬರುತ್ತಿರುವಾಗ ಆಕಸ್ಮಾತ್ತಾಗಿ ಓಲಿಕೆರಾಮ ಆ ಊರಿನ ಪಾತರಗಿತ್ತಿಯನ್ನು ನೋಡುತ್ತಾನೆ. ಅವಳ ಅಂದ ಚಂದ ಮೈಮಾಟಕ್ಕೆ ಮನ ಸೋಲುತ್ತಾನೆ ಅವಳ ಸೌಂದರ್ಯ ಕಾವ್ಯದಲ್ಲಿ ಹೀಗೆ ಚಿತ್ರಿತವಾಗಿದೆ.

"ಆನೆಗೊಂದಿ ಆಗಸಿ ಹೊರಗ ಪಾತರಗಿತ್ತಿ

ಮೂರು ಅಂತಸ್ತು ಮಾಳಿಗೆ ಮ್ಯಾಲೆ

ಅಗಿನ್ನವ್ವು ಹಣಬೆ ತಪ್ಪ ಸೀರೆ "

ಹೀಗೆ ಶಿಷ್ಟ ಸಾಹಿತ್ಯದಲ್ಲಿ ಮತ್ತು ಜನಪದ ಸಾಹಿತ್ಯದಲ್ಲಿ ಹಲವಾರು ಹೋಲಿಕೆ ವ್ಯತ್ಯಾಸಗಳನ್ನು ಗುರುತಿಸಲಾಗಿದೆ.

## ಅಡಿಟಿಪ್ಪಣಿಗಳು

1. ಎಂ.ಎಂ ಕಲಬುರ್ಗಿ
ವೀರಣ್ಣ ರಾಜೂರ
(ಸಂ) ಹೊಸಕುಮಾರರಾಮನ ಸಾಂಗತ್ಯ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
2. ಎಂ.ಎಂ ಕಲಬುರ್ಗಿ
(ಸಂ) 2007 ಬಾಲರಾಮನ ಸಾಂಗತ್ಯ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
3. ಪುರುಷೋತ್ತಮ ಬಿಳಿಮಲೆ
1999: ಕುಮಾರರಾಮ ಮತ್ತು ಕಮ್ಮಟ ದುರ್ಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

4. ಎಂ.ಎಂ. ಕಲಬುರ್ಗಿ
ವೀರಣ್ಣ ರಾಜೂರ
(ಸ) ಹೊಸ ಕುಮಾರ ಸಾಂಗತ್ಯ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಅಧ್ಯಾಯ–5

## ಸಮಾರೋಪ

ಮಧ್ಯಕಾಲೀನ ಕರ್ನಾಟಕ ಚರಿತ್ರೆಯನ್ನು ಅವಲೋಕಿಸಿದಾಗ ತಮ್ಮಷ್ಟಕ್ಕೆ ತಾವು ಸ್ವತಂತ್ರವಾಗಿ ಮತ್ತು ಪರಿಣಾಮಕಾರಿಯಾಗಿ ರಾಜ್ಯಭಾರ ಮಾಡುತ್ತಿದ್ದ ಅರಸೊತ್ತಿಗೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಮೊಘಲ್ ಸಾಮ್ರಾಜ್ಯದ ಆಳ್ವಿಕೆಯಲ್ಲಿದ್ದವು. ದೆಹಲಿಯ ಸುಲ್ತಾನರ ಸಣ್ಣ ಪುಟ್ಟ ಸಂಸ್ಥಾನಗಳ ಅಸ್ತಿತ್ವವನ್ನು ಮಾತ್ರವಲ್ಲ, ಅವುಗಳ ಜೊತೆಗೆ ಆನೇಕ ತೊಂದರೆಗಳನ್ನು ಉಂಟು ಮಾಡುತ್ತಿದ್ದರು. ದೊಡ್ಡ ದೊಡ್ಡ ಸಂಸ್ಥಾನಗಳು ಬಹಳ ವೇಗವಾಗಿ ಬುಡಕಟ್ಟು ಸಮುದಾಯಗಳ  ಬದುಕಿನೊಳಕ್ಕೆ ಪ್ರವೇಶ ಮಾಡಿಬಿಟ್ಟವು. ನಿಧಾನವಾಗಿ ಮತ್ತು ಹಂತ ಹಂತವಾಗಿ ಅವುಗಳನ್ನು ತಮ್ಮ ಮುಖ್ಯ ವಾಹಿನಿಯಲ್ಲಿ ಗುರುತಿಸಿಕೊಳ್ಳುವಂತೆ ಮಾಡಿದವು. ಈ ಕಾರಣದಿಂದಲೇ ಮಧ್ಯಕಾಲೀನ ಕರ್ನಾಟಕದ ಸುಮಾರು 9–16 ನೇ ಶತಮಾನದ ಚರಿತ್ರೆಯ ಅಧ್ಯಯನವು ಸಂಕೀರ್ಣತೆಯಿಂದಾಗಿ ಮಹತ್ವವಾಗಿದೆ.

ಮಧ್ಯಕಾಲೀನ ಕರ್ನಾಟಕದ ಪ್ರಸಿದ್ಧ ಅರಸನಾದ ಕುಮಾರರಾಮನ ಕುರಿತಾದ ದಾಖಲೆಗಳಿಂದ ತಿಳಿದು ಬಂದಿರುವುದು. ರಾಜಕೀಯವಾಗಿ ಕುಮಾರರಾಮನು ಕರ್ನಾಟಕದ ಮಹತ್ವದ ಅರಸನೇನು ಅಲ್ಲ ಬೃಹತ್ತಾದ ರಾಜ್ಯ ವಿಸ್ತರಣೆ ಮಾಡಿಲ್ಲ, ಯಾವುದೇ ಸಮಾಜೋದ್ಧಾರ ಕೆಲಸಗಳು ಮಾಡಿಲ್ಲ. ಧಾರ್ಮಿಕ ಕಾರ್ಯಗಳಿಂದ ಹೆಸರುಗಳಿಸಿಲ್ಲ. ಆದರೆ ಇಂತ ನಾಯಕನೊಬ್ಬ ಕರ್ನಾಟಕದ ಜನಮನದಲ್ಲಿ ಉಳಿದು ಜನಪ್ರಿಯನಾಗಿದ್ದಾನೆ. ಕುಮಾರರಾಮನನ್ನು ಕುರಿತು ಸಾಕಷ್ಟು ಲಿಖಿತ ಕಾವ್ಯಗಳನ್ನು ರಚಿತವಾಗಿವೆ. ಕುಮಾರ ರಾಮನೆಂಬ ಚರಿತ್ರೆಯು ನಾನಾರೀತಿಯಲ್ಲಿ ರೂಪಾಂತರಗೊಂಡಿದೆ. ಕುಮಾರರಾಮನ ಬಗೆಗೆ ಮೂರು ಲಿಖಿತ ಮಹಾ ಕಾವ್ಯಗಳು, ಸುಮಾರು ನೂರು ವರ್ಷಗಳ ಅಂತರದಲ್ಲಿ ಸೃಷ್ಟಿಯಾಗಿವೆ. 1512 ರಲ್ಲಿ ನಂಜುಂಡ ಕವಿಯು ಕುಮಾರರಾಮ ಚರಿತ್ರೆಯನ್ನು ಬರೆದರೆ 1950 ರಲ್ಲಿ ಪಾಂಚಾಳ ಗಂಗನು 'ಚನ್ನಿಗರಾಮನ ಸಾಂಗತ್ಯ'ವನ್ನು ಬರೆದನು.

ನಂಜುಂಡ ಕವಿಯು ಕುಮಾರರಾಮನನ್ನು ರಾಮನೊಡನೆ ಅರ್ಜುನನೊಡನೆ ಸಮೀಕರಿಸಿ ಭಾರತೀಯ ಸಾಂಸ್ಕೃತಿಕ ವೀರನಂತೆ ಚಿತ್ರಿಸಿದ್ದಾನೆ.

'ಪಾಂಚಾಳ ಗಂಗನು' ಕುಮಾರ ರಾಮನನ್ನು ಜಾನಪದ ಲೋಕಕ್ಕೆ ಅನುಸಂಧಾನಗೊಳಿಸಿದ್ದಾನೆ. ಮಾತಂಗಿ ಮತ್ತು ಕಳ್ಳ ರಾಮನ ಕುರಿತಾಗಿ ನೀಡಿರುವ ವಿವರಣೆಗಳೇ ಸಾಕ್ಷಿಯಾಗಿವೆ. ಲಿಖಿತವಾದ ಕಾವ್ಯಗಳಿಂದ ಭಿನ್ನವಾದ ಪಠ್ಯಗಳನ್ನು ಜಾನಪದ ಲೋಕ ಸೃಷ್ಟಿಸಿಕೊಂಡಿದೆ. ಗದ್ದಿಗೀಮಠರು ಸಂಗ್ರಹಿಸಿದ ಕುಮಾರರಾಮನ ದುಂದುಮೆ 'ಜಯಪ್ರಕಾಶ ಮಾವಿನಕುಳಿಯವರು ಸಂಗ್ರಹಿಸಿದ ತಂಪಿನ ರಾಜನ ಮಗಳು 'ಡಾ.ಕೆ.ಎಂ ಮೈತ್ರಿಯವರು ಸಂಪಾದಿಸಿರುವ ಕುಮಾರರಾಮನು ಮತ್ತು ಕೃಷ್ಣ ಗೊಲ್ಲರ ಮಹಾಕಾವ್ಯ' ಈ ಕಾವ್ಯಗಳಲ್ಲಿ ಕುಮಾರರಾಮನ ಹೆಚ್ಚಿನ ವಿವರಗಳು ದೊರೆಯುತ್ತವೆ.

ಹೀಗೆ ಲಿಖಿತ ಮತ್ತು ಜನಪದ ಸಾಹಿತ್ಯದಲ್ಲಿ ಕುಮಾರರಾಮನನ್ನು ಕುರಿತು ಭಿನ್ನತೆ ಹೋಲಿಕೆಗಳನ್ನಿಟ್ಟುಕೊಂಡು ಅವಲೋಕಿಸಿದಾಗ ಶಿಷ್ಟಸಾಹಿತ್ಯದಲ್ಲಿ ಕುಮಾರರಾಮ ಒಬ್ಬ ಸಾರ್ವಕಾಲಿಕ ಸಾಮ್ರಾಜ್ಯ ರಕ್ಷಕ ಮತ್ತು ಶುದ್ಧ ವ್ಯಕ್ತಿತ್ವವುಳ್ಳವನಾಗಿ ಚಿತ್ರಿತನಾಗಿದ್ದಾನೆ.

'ಕುಮಾರರಾಮ ಸಾಂಗತ್ಯ' ದಲ್ಲಿ ಕಾವ್ಯದ ನಾಯಕ ಕುಮಾರರಾಮನು ಮಹಾಪರಾಕ್ರಮಶಾಲಿ ಎಂಬುದಕ್ಕೆ ಸುಲ್ತಾನನ ಸೈನ್ಯವನ್ನು ಹಿಮ್ಮೆಟ್ಟುವುದು, ಒರಂಗಲ್ಲಿನ ಗಜಪತರಾಯನೊಂದಿಗೆ ಯದ್ಧದಲ್ಲಿ ಕುಮಾರರಾಮ ತೋರಿಸಿದ ಸಾಹಸಗಳು ಅದ್ಭುತವಾಗಿವೆ. ಜನಪದ ಸಾಹಿತ್ಯದಲ್ಲಂತೂ ತಮ್ಮ ಮನೆ ಮಗನಂತೆ ಕೊಂಡಾಡಿ ಹೊಗಳಿದ್ದಾರೆ.

ಬಹದೂರಖಾನನೊಂದಿಗೆ ಕುದುರೆ(ಬೊಲ್ಲ) ಮೇಲೆ ಕುಳಿತು ಹೋರಾಡುವ ಪರಿಯನ್ನು ಹಾಡಿಹೊಗಳುವುದು ಅವನ ಪರಾಕ್ರಮದ ವೈಭವವೆಂದೆ ತಿಳಿಸಬಹುದು. ಲಿಖಿತ ಸಾಹಿತ್ಯದಲ್ಲಾಗಲಿ ಜನಪದ ಸಾಹಿತ್ಯದಲ್ಲಾಗಲಿ ಕುಮಾರರಾಮನ ಪರಾಕ್ರಮ ಮೆಚ್ಚುವ ರೀತಿಯಲ್ಲಿಯೇ ವರ್ಣಿತವಾಗಿದೆ. ಈ ಎರಡು ರೀತಿಯ ಸಾಹಿತ್ಯದಲ್ಲಿ ಮುಖ್ಯವಾಗಿ ಕುಮಾರರಾಮನ ವೀರತ್ವ ಮತ್ತು ಶುಚಿತ್ವಗಳ ಮೇಲೆ ಬೆಳಕುಚಲ್ಲಿದೆ.

ರತ್ನಾಜಿ ತನ್ನ ತಂದೆಯ ಕಿರಿಯ ರಾಣಿ ತನ್ನ ಮೇಲೆ ಮೋಹಗೊಂಡರೂ ನಿರಾಕರಿಸುವ ನಾಯಕನ ಧರ್ಮ ನಿಷ್ಠೆ ವೀರತ್ವವನ್ನೂ ಪರಿಶುದ್ಧ ಚಾರಿತ್ರ್ಯವನ್ನು

ಚಿತ್ರಿಸಲಾಗಿದೆ. ರತ್ನಾಜಿಯ ಮನಸ್ಸಿಗೆ ಒಲಿಯದ ಕಾರಣ ರಾಜ ಕಂಪಿಲನ ಬಳಿ ಕುಮಾರರಾಮನ ಬಗ್ಗೆ ಆರೋಪವರಿಸುವುದು, ಮರಣದಂಡನೆಗೆ ಒಳಗಾಗುವುದು, ನಿರಪರಾಧಿಯಾದರೂ ತನ್ನ ತಂದೆಯ ಆಜ್ಞೆಯನ್ನು ಪಾಲಿಸುವುದು, ಬೈಚಪ್ಪನು ಚಾತುರ್ಯದಿಂದ ನೆಲಮಾಳಿಗೆಯಲ್ಲಿರಿಸಿ ಮಾಯಾಶಿರಸ್ಸನ್ನು ತೋರಿಸುವ ಸಂದರ್ಭ ಲಿಖಿತ ಸಾಹಿತ್ಯದಲ್ಲಿ ಚಿತ್ರಿತವಾಗಿದ್ದರೆ, ಒಲಿಕೆರಾಮನು ತನ್ನ ಅಣ್ಣನಿಗೋಸ್ಕರ ತಂದೆಯ ಆಜ್ಞೆಯನ್ನು ಪಾಲಿಸುವುದುಕ್ಕೋಸ್ಕರ ಸೆರೆಮನೆಯಿಂದ ಹೊರಬಂದು ತಲೆಯನ್ನು ಕಡಿದುಕೊಳ್ಳುವ ಚಿತ್ರಣ ಜನಪದ ಸಾಹಿತ್ಯದಲ್ಲಿ ಸೃಷ್ಟಿಯಾಗಿದೆ.

ರತ್ನಾಜಿಯ ಮದುವೆ ಸಂದರ್ಭವು ಲಿಖಿತ ಮತ್ತು ಜನಪದ ಸಾಹಿತ್ಯದಲ್ಲಿ ತೀರಾಭಿನ್ನವಾಗಿಯೇ ಚಿತ್ರಣಗೊಂಡಿದೆ ಎಂದು ಗುರುತಿಸಬಹುದು. ಲಿಖಿತ ಸಾಹಿತ್ಯದಲ್ಲಿ ರತ್ನಾಜಿಯು ರೆಡ್ಡಿ ಜನಾಂಗಕ್ಕೆ ಸೇರಿದವಳು, ಜಾತ್ರೆಯ ಸಂದರ್ಭದಲ್ಲಿ ಅವಳ ಸೌಂದರ್ಯಕ್ಕೆ ಮಾರು ಹೊಗಿ ಕಂಪಿಲನು ರತ್ನಾಜಿಯ ಸಂಬಂಧಿಕರಿಗೆ ಎರಡು ಊರು ದಾನವಾಗಿ ಕೊಟ್ಟು ಮದುವೆಯಾಗುತ್ತಾನೆ. ಜನಪದ ಸೃಷ್ಟಿಯ ಬೇರೆಯಾಗಿದೆ. ರತ್ನಾಜಿಯು ಚಿತ್ರಗೇರಿ ಪಟ್ಟಣದ ಭಾವಲು ರಾಜನ ಮಗಳು ವಿದ್ಯಾವಂತೆ ಕುಮಾರರಾಮನ ಭಾವಚಿತ್ರ ನೋಡಿ ಇವನೇ ನನಗೆ ತಕ್ಕ ಗಂಡ ಎಂದು ಒಪ್ಪಿಕೊಳ್ಳುತ್ತಾಳೆ. ಆದರೆ ಈ ರತ್ನಾಜಿ ಭಾವಚಿತ್ರ ನೋಡಿದ ಕಂಪಿಲರಾಯನು ರತ್ನಾಜಿಯ ಸೌಂದರ್ಯಕ್ಕೆ ಮನಸೋತು ತನಗೆ ಮದುವೆ ಮಾಡಿಸೆಂದು ಪಟ್ಟುಹಿಡಿಯುತ್ತಾನೆ. ಬೈಚಪ್ಪ ಮನಸ್ಸಿಲ್ಲದಿದ್ದರೂ ಕಂಪಿಲನ ಕಾಟಕ್ಕೆ ತಡೆಯಲಾಗದೆ ಮೋಸದಿಂದ ಮದುವೆ ಮಾಡಲು ಸಮ್ಮತಿಸುತ್ತಾನೆ. ಕಂಪಿಲನು ಕಂಬಳಿಯನ್ನು ಹೊದ್ದು ತಾಳಿ ಕಟ್ಟುವ ಸನ್ನಿವೇಶ ಜನಪದ ಸಾಹಿತ್ಯದಲ್ಲಿ ನೈಜವಾಗಿ ಚಿತ್ರಗೊಂಡಿದೆ. ಜನಪದರಲ್ಲಿ ಇಂಥ ಕೃತ್ಯಗಳು ಮಡಿ ಮೈಲಿಗೆ ತಪ್ಪು ಎಂಬ ಭಾವನೆಗಳು ಕಾಡುವುದಿಲ್ಲವೆಂದೆನಿಸುತ್ತದೆ ಆದ್ದರಿಂದ ಈ ಕಾರ್ಯ ನಡೆಯುತ್ತದೆ. ಅಂದರೆ ಆ ಸಮಾಜ ಎಲ್ಲೋ ಒಂದು ಕಡೆ ಇಂಥ ಕಾರ್ಯ ಒಪ್ಪಿಕೊಳ್ಳುತ್ತದೆ ಎಂಬುವುದನ್ನು ಗಮನಿಸಬಹುದು.

ಶಿಷ್ಟ ಸಾಹಿತ್ಯದಲ್ಲಿಲ್ಲದ 'ಪಾತರಗಿತ್ತಿ'ಯ ಪಾತ್ರ ಜನಪದ ಸಾಹಿತ್ಯದಲ್ಲಿ ಕಾಣುತ್ತೇವೆ. ಒಲಿಕೆರಾಮನು ಪಾತರಗಿತ್ತಿಯ ಸೌಂದರ್ಯಕ್ಕೆ ಮರುಳಾಗಿ ಅವಳ ಬಯಕೆಯನ್ನು ಈಡೇರಿಸಲು ಕಳ್ಳತನ ಮಾಡುವುದು, ಸೆರೆಮನೆ ವಾಸ ಅನುಭವಿಸುವುದು, ರಾಮ ಈ ವಿಚಾರ ತಿಳಿದು ದುಃಖಿಸುವುದು, ರತ್ನಾಜಿಯ ವ್ಯಾಮೋಹಕ್ಕೆ ಸೋಲದೆ 'ಪರನಾರಿ ಸೋದರನಂತೆ' ಮೆರೆದಿರುವುದು ಶಿಷ್ಟ ಮತ್ತು

ಜಾನಪದ ಸಾಹಿತ್ಯದೆರೆಡರಲ್ಲಿ ಬಿಂಬಿತವಾಗಿದೆ. ದೆಹಲಿಯ ಸುಲ್ತಾನನ ಮಗಳು ಹುಸೇನಿಯಾಗಿ ಜನಪದ ಸಾಹಿತ್ಯದಲ್ಲಿ ಬಿಂಬಿತವಾಗಿದ್ದರೆ, ಶಿಷ್ಟಸಾಹಿತ್ಯದಲ್ಲಿ ಮಾತಂಗಿಯಾಗಿ ಚಿತ್ರಿತವಾಗಿದ್ದಾಳೆ.

ಕುಮಾರರಾಮನ ಹುಟ್ಟು, ಅವನ ಪರಾಕ್ರಮ, ಗಜಪತಿರಾಯನೊಂದಿಗೆ ಯುದ್ಧ, ರತ್ನಾಜಿಯ ಮೋಹ, ಚೆಂಡಿನಾಟ, ನೀರಿನಾಟ, ದೆಹಲಿ ಸುಲ್ತಾನನೊಂದಿಗೆ ಯುದ್ಧ, ಕುಮಾರರಾಮನ ಸಾವು, ಮುಂತಾದ ದೃಶ್ಯಗಳಲ್ಲಿ ಸಾಮ್ಯತೆಯನ್ನು ಕಾಣಬಹುದು ಪಾತರಗಿತ್ತಿ ದೃಶ್ಯ, ಓಲಿಕೆರಾಮ, ರತ್ನಾಜಿ ಮದುವೆ, ಹುಸೇನಿಯೊಂದಿಗೆ ಕಾಳಗ, ಮುಂತಾದ ದೃಶ್ಯಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ.

ಶಿಷ್ಟಸಾಹಿತ್ಯ ಮತ್ತು ಜಾನಪದ ಸಾಹಿತ್ಯದ ಕೆಲ ಕೃತಿಗಳ ತೌಲನಿಕವಾಗಿ ದೃಷ್ಟಿ ಹರಿಸಿದಾಗ ಎರಡರಲ್ಲಿಯೂ ಕುಮಾರರಾಮನ ಅದೃಷ್ಟ ಆತನ ಸಾಹಸಗಳು ಕನ್ನಡದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಶಾಶ್ವತವಾಗಿ ಉಳಿದುಕೊಂಡಿವೆ. ಇದಕ್ಕೆ ಆತನಲ್ಲಿದ್ದ ಧರ್ಮ ಶ್ರದ್ಧೆ ಮತ್ತು ಪರಾಕ್ರಮಗಳೇ ಮುಖ್ಯ ಕಾರಣಗಳೆಂಬುವುದನ್ನು ಕೃತಿಗಳು ತಿಳಿಸುತ್ತವೆ. ಆತನ ಜೀವನದಲ್ಲಿ ಪರಾಕ್ರಮ ಒಂದೇ ಪ್ರಧಾನವಾಗಿದ್ದರೆ, ಸಾರ್ವಕಾಲಿಕ ಜನಮನ್ನಣೆಗೆ ಪಾತ್ರನಾಗುತ್ತಿರಲಿಲ್ಲ, ಇವುಗಳೊಂದಿಗೆ ಸರಿಸಮಾನರಾದ ಮಾನವ ಸಾತ್ವಿಕ ಗುಣಕ್ಕೆ ಪೂರಕವಾದ ಬೇರೊಂದು ಸದ್ಗುಣ ಕೂಡಿದ್ದುದು ಆ ಕಡುಗಲಿಯ ಬದುಕು ಸಾರ್ಥಕವಾಗಲು ಕಾರಣವಾಗಿದೆ. ಕುಮಾರರಾಮನ ಜೀವನದ ಕಲಿತನ, ಶುಚಿತ್ವಗಳಿಂದ ಕೂಡಿ ಜನಮನ್ನಣೆಗೆ ಪಾತ್ರವಾಗಿದೆ. ಕಮ್ಮಟ ದುರ್ಗದ ಪತನವಾದಂದಿನಿಂದಲೂ ಈ ರಣಧೀರನ ಪರಾಕ್ರಮ, ಬಲಿದಾನಗಳು ನಮ್ಮ ಜನತೆಯ ಆರಾಧ್ಯ ಮೌಲ್ಯಗಳಾಗಿವೆ.

ಹೀಗೆ ಕುಮಾರರಾಮನ ಜೀವನ ವೃತ್ತಾಂತವು ಜನರ ಮನಸ್ಸಿನಲ್ಲಿ ಬೇರೂರುವಂತೆ ಮಾಡಿದ ಲಿಖಿತ ಕಾವ್ಯಗಳು ಕುಮಾರರಾಮನನ್ನು ಹಾಡಿ ಹೊಗಳಿ ಅವನ ಜೀವನವನ್ನು ಉತ್ತುಂಗ ಶಿಖರಕ್ಕೇರಿಸಿವೆ. ಕುಮಾರರಾಮನನ್ನು ಕಥಾನಾಯಕನನ್ನಾಗಿ ಚಿತ್ರಿಸಿವೆ. ಈ ದೃಷ್ಟಿಯಿಂದ ಮಹಿಮಾ ಪುರುಷರು ಚರಿತ್ರಕಾರರು ಮರೆತರೂ ಕನ್ನಡ ಜನತೆ ಮರೆಯದೆ ಈಗಲೂ ಹಲವಾರು ಕೃತಿಗಳು ಹುಟ್ಟಿಕೊಳ್ಳುತ್ತಿವೆ. ಮಧ್ಯಕಾಲೀನ ಸಾಹಿತ್ಯದಿಂದ ಹೊಸಗನ್ನಡ ಸಾಹಿತ್ಯದವರೆಗೆ ಬರಹಗಳು ಕಾಣಸಿಗುತ್ತವೆ.

ಜಾನಪದ ಸಾಹಿತ್ಯದಲ್ಲಿ ಕುಮಾರರಾಮನನ್ನು ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಜನಪದರ ಆಚರಣೆಗಳಾದ ನಂಬಿಕೆ, ಸಂಪ್ರದಾಯ, ಉತ್ಸವ ಇತ್ಯಾದಿ ವಿವರಗಳಲ್ಲಿ ಕುಮಾರರಾಮನ ಉದಾತ್ತ ಜೀವನದ ಮಹತ್ವವನ್ನು ಮನತುಂಬಿ ಹಾಡಿ ಹೊಗಳಿದ್ದಾರೆ. ಕುಮಾರರಾಮನ ಕಥೆ ಜನ ಎಂದೆಂದೂ ಮರೆಯದಂತೆ ಚಿತ್ರಿಸಲಾಗಿದೆ. ಅದು ಪ್ರತಿಯೊಬ್ಬರ ಮನ ತಟ್ಟುವಂತೆ ಮಾಡಿದ್ದಾರೆ. ಇದಕ್ಕೆ ಸಾಕ್ಷಿ ಎಂಬಂತೆ ಕಥೆಗಳು, ಕಥನ ಗೀತೆಗಳು, ನಾಡ ನುಡಿಗಳು, ಜನಪದ ಗೀತೆಗಳು, ದುಂದುಮೆಗಳು ಇತ್ಯಾದಿ ಪ್ರಕಾರಗಳಲ್ಲಿ ಕುಮಾರರಾಮನ ವ್ಯಕ್ತಿತ್ವವನ್ನು ಅನಾವರಣಗೊಳಿಸಲಾಗಿದೆ. ಕರ್ನಾಟಕದ ಅನೇಕ ಸಮುದಾಯಗಳು ಕುಮಾರರಾಮನ ನಂಬಿಕೆ ಆಚರಣೆಗಳನ್ನು ಪಾಲಿಸಿಕೊಂಡು ಬಂದಿವೆ. ಇನ್ನು ಹಲವು ಕಡೆ ಕುಮಾರರಾಮನನ್ನು ದೈವವಾಗಿರಿಸಿಕೊಂಡು ಹಾಡು ಕಟ್ಟುತ್ತಲೇ ಇದ್ದಾರೆ. ಜನಪದ ಸಾಹಿತ್ಯದಲ್ಲೂ ಕುಮಾರರಾಮನ ಆದರ್ಶಗಳು ಹೆಚ್ಚುಕಾಲ ಉಳಿಯುವಂತೆ ಅಭಿವ್ಯಕ್ತಪಡಿಸಲಾಗಿದೆ. ಆತನನ್ನು ಕುರಿತು ಜನಪದ ಸಾಹಿತ್ಯದಲ್ಲಿ ವರ್ಣನೆಯ ಅಂಶ ಹೆಚ್ಚು ಕಂಡು ಬರುತ್ತದೆ. ವಸ್ತು ಒಂದೇ ಆಗಿದ್ದರೂ ಅವರು ಕಟ್ಟಿಕೊಡುವ ಚರಿತ್ರೆ ಸ್ವಲ್ಪ ಭಿನ್ನವಾಗಿ ಬಿಂಬಿಸಲಾಗಿದೆ. ಹೀಗೆ ಬಿಂಬಿತವಾಗಿರುವ ಕುಮಾರರಾಮ ಶಿಷ್ಟ ಮತ್ತು ಜಾನಪದ ಸಾಹಿತ್ಯದಲ್ಲಿನ ತೌಲನಿಕ ದೃಷ್ಟಿಕೋನವನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ರಾಜಧರ್ಮಕ್ಕೆ ಬಂದರೆ ಅಂದಿನ ರಾಜಸತ್ತಾಯುಗದ ಚಿತ್ರಿಸಿದ ಜನಪದ ಮತ್ತು ಶಿಷ್ಟ ಸಾಹಿತ್ಯಗಳೆರಡರಲ್ಲಿ ಸ್ಪಷ್ಟವಾಗಿ ಮೂಡಿಬಂದಿದೆ 'ವೀರ ಭೋಜ್ಯಾ ವಸುಂಧರಾ' ಎಂಬಂತೆ ತೋಳ್ಬಲದ ಮೇಲೆ ಅಂದಿನ ರಾಜ್ಯಭಾರ ನಡೆದಿತ್ತು ಸಣ್ಣ ಪುಟ್ಟ ಪಾಳೆಯಗಾರರನ್ನು ಕಂಪಿಲ ಅರಸು ಸೋಲಿಸುವುದು, ದಿಲ್ಲಿ ಸುರತಾಳ–ಕಂಪಿಲರಾಯ–ಓರುಗಲ್ಲು ಕಾಕತೀಯರು ತಮ್ಮ ಪ್ರಭುತ್ವಕ್ಕಾಗಿ ಮೇಲಾಟ ನಡೆಸುವುದು, ಸಮಕಾಲೀನ ಪ್ರಭು ಶಕ್ತಿಗೆ ನಿದರ್ಶನವೆನಿಸಿವೆ, 'ಸಾರಿದವರ ಕಾಯ್ವ, ಹೋರಿದವರ ಕೊಲ್ವ' ಎಂಬ ನೀತಿ ಅಂದು ಬೆಲೆ ಪಡೆದಿದ್ದ ಕಾರಣ, ಅನೇಕ ಯೋಧರ ವೀರಮರಣ ಇಲ್ಲಿ ಚಿತ್ರಿತವಾಗಿದೆ. ಸ್ತ್ರೀಯರೂ ವೀರ ಪತ್ನಿಗೆ ನಿದರ್ಶನವೆಂಬಂತೆ 'ಮಾಸ್ತಿ'ಯಾಗುವ ವಿವರಗಳು ಇಲ್ಲಿ ದಟ್ಟವಾಗಿ ಮೂಡಿವೆ. ಯುದ್ಧಕ್ಕೆ ಸಂಬಂಧಪಟ್ಟ ಕೋಟೆ, ಕೊತ್ತಲ, ಅಗಳು, ಅನೇಕ ಬಗೆಯ ಆಯುಧಗಳು, ಪೆಟಲು ಹೆಸರಿನ ಮದ್ದು ಉಪಯೋಗಿಸುವ ಬಂದೂಕು, ಇತ್ಯಾದಿಗಳು ರಣರಂಗದ ಚಿತ್ರವನ್ನೀಯುತ್ತದೆ, ದಾಳಿಸಂದರ್ಭದಲ್ಲಿ ಸಾಮಾನ್ಯ ಕುಟುಂಬಗಳು ಅನುಭವಿಸುತ್ತಿದ್ದ ಬವಣೆ, ಗುಳೆ ಹೋಗುತ್ತಲಿದ್ದ ರೀತಿ ದಟ್ಟವಾಗಿ ಮೂಡಿದೆ.

'ಮೊರೆ ಹೊಕ್ಕವರ ಕಾಯ್ವುದು' ರಾಜಸತ್ತಾಯುಗದ ಮುಖ್ಯ ಲಕ್ಷಣ ಕಮ್ಮಟದುರ್ಗದ ಯುದ್ಧಕ್ಕೆ ಮುಖ್ಯ ಕಾರಣ ಮೊರೆ ಹೊಕ್ಕ ಬಹುದ್ದೂರನಿಗೆ ಕುಮಾರರಾಮ ರಕ್ಷಣೆ ಕೊಟ್ಟದ್ದು ಈ ಒಂದು ವಿಷಯ ದಿಲ್ಲಿ ಸುಲ್ತಾನನ್ನು ಎದುರು ಹಾಕಿಕೊಳ್ಳುವಂತೆ ಮಾಡಿತು. ಒಂದಲ್ಲ ಎರಡು ಮೂರು ಸಲ ಯುದ್ಧವೇರ್ಪಟ್ಟು, ಅಭೇದ್ಯ ಕಮ್ಮಟದುರ್ಗದ ನಾಶಕ್ಕೆ ಕಾರಣವಾಗಿರುವುದನ್ನು ಕಾಣಬಹುದು.

ರಾಜಸತ್ತಾಯುಗದ ಶೌರ್ಯ ಮೌಲ್ಯಕ್ಕೆ ಮೆರುಗು ಬರುವುದು, ಪರಸ್ತ್ರೀ ವಿಷಯದ ಶುಚಿತ್ವದಿಂದ-ಎಂದು ನಂಬಿದ್ದ ಕಾಲವದು, ಹೀಗಾಗಿ ಈ ಪೂರ್ವದ ರಾಜರ ಶೌರ್ಯ ಘಟನೆಗಳಿಗಿಂತ ಶುಚಿ ಘಟನೆಯನ್ನು ಒಳಗೊಂಡ ಕುಮಾರರಾಮನ ಜೀವನ ಜನತೆಗೆ ಆದರ್ಶವಾಯಿತು. ಕುಮಾರರಾಮನ ಜೀವನದಲ್ಲಿ ಹೆಣ್ಣು ಮೂರು ರೂಪಗಳಲ್ಲಿ ಕಾಡಿದೆ. ಕಂಪಿಲನ ಕಿರಿಯ ರಾಣಿ ರತ್ನಾಜಿ 'ಮುನಿದರೆ ಮರಿಯಾಗಿ' ಸುರಿತಾಳನ ಮಗಳು ಬಾಬಮ್ಮ 'ವಿಫಲ ಪ್ರೇಮಿಯಾಗಿ' ಏರಿಬಂದ ಮಾದಿಗಿತಿ 'ಜೀವಹಂತಕಿಯಾಗಿ' ಅವನ ಸುತ್ತ ಪಾತ್ರ ಮಾಡಿದ್ದಾರೆ. ಇವರಲ್ಲಿ ಮೊದಲಿನ ಇಬ್ಬರ ವಿಷಯದಲ್ಲಿ ಅವನು ಶುಚಿಮೌಲ್ಯ ಮೆರೆದಿದ್ದಾನೆ. ತನ್ನ 'ಪರನಾರಿ ಸೋದರ' ಬಿರುದಿಗೆ ಅರ್ಥಬರುವ ಹಾಗೆ ನಡೆದುಕೊಂಡಿದ್ದಾನೆ.

ಕುಮಾರರಾಮನ ಚರಿತ್ರೆಯಲ್ಲಿ 'ಶೃಂಗಾರ ಜೀವನ' ಕುಮಾರರಾಮನ ತಂದೆ ಕಂಪಿಲರಾಯನು ಹರಿಯಾಲದೇವಿಯನ್ನು ಹೊರತುಪಡಿಸಿ ಐದುಜನರನ್ನು ಮದುವೆಯಾಗಿದ್ದು ವಯೋವೃದ್ಧನಾಗಿದ್ದರೂ ಯುವತಿ ರತ್ನಾಜಿಯನ್ನು ಮನದನ್ನೆಯಾಗಿ ಸ್ವೀಕರಿಸಿದ್ದು ರತ್ನಾಜಿಯು ಕುಮಾರರಾಮನನ್ನು ಪ್ರೇಮಿಸಿದ ಪ್ರಸಂಗ ತುಂಬ ಆಕರ್ಷಣೆ ಎನಿಸಿದೆ, ಇದಲ್ಲದೆ ಹೊಸಮಲೆದುರ್ಗ, ಕಮ್ಮಟಗಳ ಸೂಳೆಗೇರಿ ವರ್ಣನೆ, ಜನಪದ ಕಾವ್ಯದಲ್ಲಿ ಚಿತ್ರಿತವಾಗಿರುವ ಪಾತರಗಿತ್ತಿಯ ಪಾತ್ರ ವರ್ಣನೆ, ಶೃಂಗಾರ ಜೀವನಕ್ಕೆ ಹಿಡಿದ ಕನ್ನಡಿ ಎಂದೇ ಹೇಳಬಹುದು. ಇದಲ್ಲದೆ ಹೊಸಮಲೆದುರ್ಗ, ಕಮ್ಮಟಗಳ ಸೂಳೆಗೇರಿ ವರ್ಣನೆ, ಚಂಡಿನಾಟ ನೋಡಲು ಬಂದ ಸೂಳೆಯರ ವರ್ಣನೆಗಳು ಶೃಂಗಾರ ಜೀವನದ ಇನ್ನೊಂದು ಮುಖವೆನಿಸಿವೆ.

ಆಕರ ಗ್ರಂಥಗಳು


1. ಡಾ.ಕೆ.ಎಂ.ಮೈತ್ರಿ (ಸಂ) ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

2. ಡಾ.ಎಂ.ಎಂ.ಕಲ್ಬುರ್ಗಿ

   ವೀರಣ್ಣ ರಾಜೂರ (ಸಂ) ಹೊಸಕುಮಾರರಾಮನ ಸಾಂಗತ್ಯ, ಪ್ರಸಾರಾಂಗ, ಕನ್ನಡ ವಿಶ್ವದ್ಯಾನಿಲಯ, ಹಂಪಿ.

3. ಗದ್ದಗೀಮಠ್ ಬಿ.ಎಸ್. (ಸಂ) 1962 ಕುಮಾರರಾಮನ ದುಂದುಮೆ, ಪ್ರಬುದ್ಧ ಕರ್ನಾಟಕ, ಮೈಸೂರು ವಿಶ್ವದ್ಯಾಲಯ, ಮೈಸೂರು.

4. ತಳವಾರ ಹೆಚ್.ಎಂ. 2002 ನಂಜುಂಡ ಕವಿಯ ರಾಮನಾಥ ಚರಿತೆ; ಸಾಂಸ್ಕೃತಿಕ ಅಧ್ಯಯನ, ಅಭಿರುಚಿ ಪ್ರಕಾಶನ ಮೈಸೂರು.

5. ಪುರುಷೋತ್ತಮ ಬಿಳಿಮಲೆ 1999 ಕುಮಾರರಾಮ ಮತ್ತು ಕಮ್ಮಟದುರ್ಗ, ಪ್ರಸಾರಾಂಗ, ಕನ್ನಡ ವಿಶ್ವದ್ಯಾನಿಲಯ, ಹಂಪಿ.

6. ವರದರಾಜ್‌ರಾವ್.ಜಿ 1961 ಕುಮಾರರಾಮನ ಸಾಂಗತ್ಯಗಳು, ಪ್ರಸಾರಾಂಗ, ಮೈಸೂರು ವಿಶ್ವದ್ಯಾಲಯ, ಮೈಸೂರು.

7. ಡಾ.ಸಿ.ಮಹದೇವ್ ಕಮ್ಮಟದುರ್ಗದ ಆರಸರು, ಪ್ರಸಾರಾಂಗ, ಕನ್ನಡ ವಿಶ್ವದ್ಯಾನಿಲಯ, ಹಂಪಿ.

8. ಬೋಜರಾಜ ಪಾಟೀಲ 1998 ಕುಮಾರರಾಮನನ್ನು ಕುರಿತ ಐತಿಹಾಸಿಕ ಮಹತ್ವದ ಒಂದು ಹೊಸ ಶಾಸನ, ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾಡಮಿ, ಬೆಂಗಳೂರು.

9. ಲಕ್ಷ್ಮಣತೆಲಗಾವಿ ಮತ್ತು ಶ್ರೀನಿವಾಸ್ ಎಂ.ವಿ. (ಸಂ) 1995; ಹುಲ್ಲೂರ ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣಾ ಸಮಿತಿ ಚಿತ್ರದುರ್ಗ.

10. ಲಕ್ಷ್ಮಣತೆಲಗಾವಿ (ಸಂ) 1987 ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

11. ವರದರಾಜ್‌ರಾವ್.ಜಿ ಕಮ್ಮಟದುರ್ಗ, ಐ.ಬಿ.ಹೆಚ್.ಪ್ರಕಾಶನ ಗಾಂಧಿನಗರ, ಬೆಂಗಳೂರು.

12. ಹಿರೇಮಠ.ಎಸ್.ಎಸ್. 2000; ಕೊಪ್ಪಳ ಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

13. ಎಂ.ಎಂ.ಕಲ್ಬುರ್ಗಿ (ಸಂ) 2001; ಕೊಮಾರರಾಮಯ್ಯ ಚರಿತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

14. ಎಂ.ಎಂ.ಕಲ್ಬುರ್ಗಿ (ಸಂ) 2002; ಬಾಲರಾಮನ ಸಾಂಗತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

15. ಅಂಬಳಿಕೆ ಹಿರಿಯಣ್ಣ, 1998; ಜನಪದ ಮಹಾಕಾವ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.